# ಪಾನಸಿ

ಸೆಂಪ್ಟೆಂಬರ್ 2002

ತಿಂಗಳ ಪತ್ರಿಕೆ

♠ ಪ್ರಾಚೀನ ಭಾರತದಲ್ಲಿ ಮಹಿಳೆಯರು

♠ ಬಂಗಾರದ ಪಂಜರದಲ್ಲಿ ಒಂಟಿಯಾಗಿ ಬದುಕಲು ಆಗಲಿಲ್ಲ....

♠ ಗುತ್ತಿಗೆ ಪೌರಕಾರ್ಮಿಕರ ಹೋರಾಟದಲ್ಲೊಂದು ಮೈಲಿಗಲ್ಲು

♠ ಭೂಮಿಗಾಥೆ

# ಮಾನಸ

ತಿಂಗಳ ಪತ್ರಿಕೆ ಜುಲೈ 2002
ಸಂಪುಟ 17 ಸಂಚಿಕೆ : 8



**ವಿಳಾಸ**
**" ಮಾನಸ ತಿಂಗಳ ಪತ್ರಿಕೆ "**
**ಪಂಚಾಯಿತಿ ರಸ್ತೆ**
**ಕಾಡುಗೋಡಿ ಪೋಸ್ಟ್**
**ಬೆಂಗಳೂರು - 560 067**
**ಇ-ಮೈಲ್** : manasapathrike@yahoo.co.in

ಸೂಚನೆ: ಬಿಡಿಪ್ರತಿ 5-00 ರೂ.
ವಾರ್ಷಿಕ ಚಂದಾ 50-00 ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು

## ಈ ಸಂಚಿಕೆಯಲ್ಲಿ...





ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - 560 067

# ಸಂಪಾದಕೀಯ



ಬಾಂಬೆ, ಆಗಸ್ಟ್ 2002, ಮನೋವೈಕಲ್ಯಕ್ಕೊಳಗಾದ 12 ವರ್ಷದ ಬಾಲೆಯೊಬ್ಬಳು ಸಬರ್‌ಬನ್ ರೈಲಿನಲ್ಲಿ ಕುಡುಕನೊಬ್ಬನಿಂದ ಅತ್ಯಾಚಾರಕ್ಕೊಳಗಾದಳು. ಅಲ್ಲಿದ್ದ ಐವರು ಪುರುಷರು ಘಟನೆಯನ್ನು ವೀಕ್ಷಿಸಿದ್ದರಷ್ಟೆ. ಅದನ್ನು ನಿಲ್ಲಿಸಲು ಅವರೇನೂ ಮಾಡಲಿಲ್ಲ.

ದೆಹಲಿ, 19 ಆಗಸ್ಟ್ 2002. 32 ವರ್ಷದ ಮಧ್ಯ ವಯಸ್ಕಳೋರ್ವಳನ್ನು ಕಾರೊಳಗೆ ತಳ್ಳಿ ಆಕೆಯ ಮೇಲೆ ನಾಲ್ವರು ಅತ್ಯಾಚಾರ ನಡೆಸಿದರು.

ಬೆಂಗಳೂರು 19 ಆಗಸ್ಟ್ 2002. ಪ್ರೀತಿಯನ್ನು ತಿರಸ್ಕರಿಸಿದ್ದಕ್ಕಾಗಿ ಒಬ್ಬ ಹುಡುಗ ಶೃತಿಯ ಮುಖದ ಮೇಲೆ ಒಂದು ಕ್ಯಾನ್ ಆ್ಯಸಿಡ್ ಎರಚಿದ್ದರಿಂದ 10ನೆಯ ತರಗತಿಯ ಶೃತಿ ಸುಟ್ಟ ಗಾಯಗಳಿಂದ ಆಸ್ಪತ್ರೆ ಸೇರಿದ್ದಾಳೆ.

ದೆಹಲಿ ವಿಶ್ವವಿದ್ಯಾನಿಲಯ 20 ಆಗಸ್ಟ್ 2002. ವಿದ್ಯಾರ್ಥಿನಿಯೊಬ್ಬಳನ್ನು ಕಾರೊಳಗೆ ತಳ್ಳಿ ನಾಲ್ವರು ಅತ್ಯಾಚಾರವೆಸಗಿದ್ದಾರೆ.

24 ಆಗಸ್ಟ್ 2002. ಆರ್.ಎಸ್. ಶರ್ಮ ಉನ್ನತ ಪೋಲೀಸ್ ಅಧಿಕಾರಿ ತನ್ನ ಸೇವಕನನ್ನು ಯಾವುದೋ ಸಣ್ಣ ತಪ್ಪಿನ ಮೇಲೆ ಜೈಲಿಗೆ ಕಳುಹಿಸಿ ಆತನ ಹೆಂಡತಿಯ ಮೇಲೆ ಅತ್ಯಾಚಾರವೆಸಗಿದ್ದಾನೆ.

ಹೀಗೆ ಮಹಿಳೆಯ ಮೇಲೆ ನಡೆಯುತ್ತಿರುವ ಹಿಂಸಾ ಕೃತ್ಯಗಳು ಮಹಿಳೆಯ ಹಾಗೂ ಹುಡುಗಿಯರ ಬದುಕು ಈ ದೇಶದಲ್ಲಿ ಅಭದ್ರವಾಗಿದೆ ಎಂಬುದನ್ನು ತೋರಿಸುತ್ತಿದೆ. ಸುಭದ್ರವೆನಿಸಿಕೊಂಡು ರೈಲು ಗಾಡಿಗಳೂ ಸಹ ಹೆಂಗಸರಿಗೆ ಪ್ರಯಾಣದಲ್ಲಿ ಭದ್ರತೆಯನ್ನು ಒದಗಿಸುತ್ತಿಲ್ಲ. ಆಕೆ ಜನ ಸಂದಣಿ ದಟ್ಟವಾಗಿರುವ ನಗರ ಪ್ರದೇಶದ ವಿದ್ಯಾರ್ಥಿನಿಯಾಗಿರಬಹುದು, ಅಥವಾ ಸಣ್ಣ ಪಟ್ಟಣದಲ್ಲಿ ಸೇವಕನೊಬ್ಬನ ಹೆಂಡತಿಯಾಗಿರಬಹುದು. ಲೈಂಗಿಕ ಹಿಂಸೆ ಅನಾಗರಿಕ ರೀತಿಯಲ್ಲಿ ಎಲ್ಲಾ ಜಾತಿ, ವರ್ಗಗಳನ್ನು ಮೀರಿ ನಡೆಯುತ್ತಿದೆ. ಮಹಿಳಾ ಚಳುವಳಿ ಗಳಿಸಿದ್ದ ಎಲ್ಲವನ್ನೂ ಇಲ್ಲವಾಗಿಸುತ್ತಾ, ಈ ರೀತಿಯ ಅತ್ಯಾಚಾರ ಅಥವಾ ಆಕ್ರಮಣ ಆಕೆ ಮನೆಯಲ್ಲಿಯೇ ಇದ್ದಿದ್ದರೆ ನಡೆಯುತ್ತಲೇ ಇರಲಿಲ್ಲ ಎನ್ನುವ ಕಂದಾಚಾರದ ಹೆಂಗಸರ ಪ್ರತಿಮೆಗಳನ್ನು ಮತ್ತೆ ಪ್ರತಿಷ್ಠಾಪಿಸಲು ಪ್ರಯತ್ನಿಸಲಾಗುತ್ತಿದೆ.

ನಾವು ಬದುಕುತ್ತಿರುವ ವಾಸ್ತವ ಇದಕ್ಕೆ ಭಿನ್ನವಾಗಿದೆ. ಇತ್ತೀಚಿನ ಸಂಖ್ಯಾಧಾರಗಳು ತಿಳಿಸುವಂತೆ 54 ಮಹಿಳೆಯರು ಪ್ರತಿ ನಿತ್ಯ ಭಾರತದಲ್ಲಿ ಅತ್ಯಾಚಾರಕ್ಕೊಳಗಾಗುತ್ತಾರೆ. ಅಂದರೆ 35 ನಿಮಿಷಗಳಿಗೊಬ್ಬರು. 85% ಮಹಿಳೆಯರು ಅವರಿಗೆ ಗೊತ್ತಿರುವ ಪುರುಷರಿಂದಲೇ ಅತ್ಯಾಚಾರಕ್ಕೊಳಗಾಗುತ್ತಾರೆ. ಮನೆ ನಮಗೆ ಭದ್ರತೆಯ ಸ್ವರ್ಗದ ತಾಣವಾಗಿಲ್ಲ. ನಿಜವೆಂದರೆ ಮಹಿಳೆಯ ಮೇಲಿನ ಹಿಂಸೆ ಮನೆಯಿಂದ ಪ್ರಾರಂಭವಾಗಿ ಹೊರಗಡೆಯ ಸಮಾಜದಲ್ಲಿ ವಿಸ್ತೃತಗೊಂಡಿದೆ. ವಿವಾಹದೊಳಗಿನ ಹಿಂಸೆಯಂತಹ ಮನೆಯ ಹಿಂಸೆಗಳು ಕಾನೂನು ಸಮ್ಮತಿಯನ್ನು ಗಿಟ್ಟಿಸಿಕೊಳ್ಳುತ್ತವೆ. ಕೆಲಸದ ಸ್ಥಳದಲ್ಲಿ ಅಥವಾ ಮೇಲ್ವರ್ಗದ ಜಮೀನ್ದಾರರಿಂದ ನಡೆಯುವ ಲೈಂಗಿಕ ಶೋಷಣೆ ಅಥವಾ ಅತ್ಯಾಚಾರವನ್ನು ಪರಿಣಾಮಕಾರಿಯಾಗಿ ತಡೆಯುವ ವ್ಯವಸ್ಥೆ ನಮ್ಮಲ್ಲಿ ಇಲ್ಲ. ಮಿಲಿಟರಿಯವರು ತಮ್ಮ ಕೌಂಟರ್ ಇನ್‌ಸರ್‌ಜನ್ಸಿ ಆಪರೇಷನ್ ಗಳಲ್ಲಿ ಅತ್ಯಾಚಾರವೆಸಗಿ ಸರ್ಕಾರ, ಪ್ರಭುತ್ವದ ರಕ್ಷಣೆ ಪಡೆಯುತ್ತಾರೆ. ಗುಜರಾತಿನಲ್ಲಿ ನಡೆದ ಅನಾಗರಿಕ ಅತ್ಯಾಚಾರವನ್ನು ನಾವು ಕಂಡಿದ್ದೇವೆ. ಸಮೂಹವೊಂದನ್ನು ನಾಶಗೊಳಿಸುವ ಹಿನ್ನಲೆಯಲ್ಲಿ ಅಲ್ಪ ಸಂಖ್ಯಾತ ಮಹಿಳೆಯರನ್ನು ಅಂಗವಿಹೀನಗೊಳಿಸಲಾಗುತ್ತಿದೆ.

ಅತ್ಯಾಚಾರಿಗಳು ಶಿಕ್ಷೆಯಿಲ್ಲದೇ ತಲೆ ಎತ್ತಿಕೊಂಡು ತಿರುಗುತ್ತಾರೆ. ಮಹಿಳೆಯರು ಭಗ್ನಗೊಂಡ ತಮ್ಮ ಬದುಕುಗಳ ತುಂಡುಗಳನ್ನು ಸಮುದಾಯದವರ ನೆರವಿಲ್ಲದೇ, ಪ್ರಭುತ್ವ, ಸರಕಾರದ ನೆರವಿಲ್ಲದೇ ಒಂದುಗೂಡಿಸಬೇಕಾಗಿದೆ.

ದೇವಸ್ಥಾನದ ವ್ಯವಸ್ಥಾಪಕ ಮಂಡಳಿ ಪೆಟಿಷನ್ ಹಾಕಿದ್ದರಿಂದ ರಾಜಸ್ತಾನದ ಹೈ ಕೋರ್ಟು ಇತ್ತೀಚಿಗೆ ಎರಡು ಸತಿ ಸ್ಥಳಗಳಲ್ಲಿ ಪೂಜೆ ಮಾಡಬಹುದೆಂದು ತೀರ್ಪಿತ್ತು ಮಹಿಳೆಯರ ಹಕ್ಕುಗಳ ಬೇರುಗಳಿಗೇ ಬಲವಾದ ಪೆಟ್ಟು ನೀಡಿದೆ. ಇಂದಿನ ಜಾಗತೀಕರಣದ ಪ್ರಪಂಚದಲ್ಲಿ ಸುಲಭ ಹಾಗೂ ತಕ್ಷಣ ಹಣ ಮಾಡುವ ಉದ್ದೇಶಕ್ಕೆ ಸತಿ ಯು ವ್ಯಾವಹಾರಿಕ ಕ್ರಿಯೆಯಾಗಿದ್ದು, ಇದು ದೇವಸ್ಥಾನದ ಟ್ರಸ್ಟಿನ ಅಧಿಕಾರಿಗಳಿಗೆ ಲಾಭವನ್ನು ಒದಗಿಸಿಕೊಡುತ್ತದೆ. ಲಾಭದ ದುರಾಸೆಯನ್ನೊಳಗೊಂಡ ಆಧುನಿಕ ಜಗತ್ತು ಹಿಂಸೆಯ ನವೀನ ಮಾದರಿಗಳನ್ನು ಹೆಂಗಸರ ಮೇಲೆ ಪ್ರಯೋಗಿಸ ತೊಡಗಿದೆ. ಅದು ಲಿಂಗ ನಿರ್ಧಾರದ ಕ್ರಿಯೆಯಾಗಿರಬಹುದು, ಲಿಂಗಾಧಾರಿತ ಗರ್ಭಪಾತ ವಾಗಿರಬಹುದು, ಕುಟುಂಬ ಯೋಜನೆಯ ಹೊಸ ವಿಧಾನಗಳ ಹಿಂಸೆಯಾಗಿರಬಹುದು.

ಈ ಲೈಂಗಿಕ ಹಿಂಸೆಯನ್ನು ನಾವು ಹೇಗೆ ಎದುರಿಸ ಬೇಕು? ಪಿತೃ ಪ್ರಧಾನವಾದ ಪ್ರಭುತ್ವ, ಸಮಾಜದಿಂದ ಹೆಚ್ಚಿನದೇನನ್ನು ನಿರೀಕ್ಷಿಸದೆ. ಬೀದಿಗಿಳಿದು ಪ್ರತಿಭಟಿಸದೆ ಮೌನ ಸಂಸ್ಕೃತಿಗೇಕೆ ಶರಣಾಗಿದ್ದೇವೆ? ಮಹಿಳೆಯರು ಒಂದಾಗಿ ಲೈಂಗಿಕ ಶೋಷಣೆಯ ವಿರುದ್ಧ ಹೋರಾಡಬೇಕಾಗಿದೆ. ಬೀದಿಗಿಳಿದು ನಾವಿಂದು ಸಮಾಜಕ್ಕೆ - ಲೈಂಗಿಕ ಶೋಷಣೆ ಸಾಧ್ಯವಿಲ್ಲ ಎಂಬ ಸಂದೇಶವನ್ನು ಸಾರಬೇಕಾಗಿದೆ.

**- ಸಂಪಾದಕ ಮಂಡಳಿ**

**ಆಸ್ತಿ, ಉತ್ಪತ್ತಿ ಮತ್ತು ಸಂತಾನೋತ್ಪತ್ತಿ**

**ಸ್ತ್ರೀಧನ ಹೇಗೆ ಶ್ರೀಮಂತಗೊಳಿಸುತ್ತದೆ?**

19ನೇ ಮತ್ತು 20ನೇ ಶತಮಾನದ ಆರಂಭದಲ್ಲಿ ಸಾಮಾನ್ಯವಾಗಿ ಚರ್ಚಿಸಲಾದ ಪ್ರಶ್ನೆಗಳಲ್ಲಿ ಮಹಿಳೆಯರ ಆಸ್ತಿ ಪ್ರವೇಶಾಧಿಕಾರದ ಪ್ರಶ್ನೆ ಒಂದಾಗಿತ್ತು. ಮನಸ್ಮೃತಿಯನ್ನೊಳಗೊಂಡಂತೆ ಶಾಸ್ತ್ರಗ್ರಂಥಗಳನ್ನಾ - ಧಾರಿಸಿದ ಉತ್ತರ ಹೆಚ್ಚು ಸಂದರ್ಭಗಳಲ್ಲಿ ಇತ್ಯಾತ್ಮಕವಾಗಿತ್ತು. ವಾಸ್ತವದಲ್ಲಿ ಬಹಳಷ್ಟು ಶಾಸ್ತ್ರಗಳು ಮತ್ತವುಗಳನ್ನೂ ಕುರಿತ ವ್ಯಾಖ್ಯಾನಗಳು **ಸ್ತ್ರೀಧನ** ಅಂದರೆ ವಾಚ್ಯಾರ್ಥದಲ್ಲಿ ಮಹಿಳೆಯರ ಸಂಪತ್ತನ್ನೂ ಕುರಿತ ಚರ್ಚೆಗಳನ್ನೊಳಗೊಂಡಿವೆ. ಆಧುನಿಕ ಪಂಡಿತರು ಈ ಗ್ರಂಥಗಳ ಆಧಾರದ ಮೇಲೆ ಮಹಿಳೆಯರಿಗೆ ಆಸ್ತಿ ಅಧಿಕಾರ ಇತ್ತೆನ್ನಲು ಸಾಕಷ್ಟು ಪುರಾವೆಗಳಿವೆ ಎಂದು ತೀರ್ಮಾನಿಸಿದರು.

ಆದರೆ ಇಲ್ಲಿ ನಮ್ಮ ನಿಕಟಗಮನಕ್ಕೆ ಅರ್ಹವಾದ ಎರಡು ಸವಾಲುಗಳಿದ್ದವೆನ್ನುವುದು ಬಹಳ ಬೇಗ ಮನವರಿಕೆ ಯಾಯಿತು :

❖ **ಸ್ತ್ರೀಧನ** ಎಂದರೆ ವಾಸ್ತವದಲ್ಲಿ ಏನನ್ನು ಒಳಗೊಳ್ಳುತಿತ್ತು, ಮತ್ತೇನನ್ನು ಒಳಗೊಳ್ಳುತ್ತಿರಲಿಲ್ಲ ?

❖ ಇದಕ್ಕೆ ಸಂಬಂಧಿಸಿದಂತೆ, ಉತ್ಪಾದನಾ ಪ್ರಕ್ರಿಯೆಗಳ ಹಿನ್ನೆಲೆಯಲ್ಲಿ **ಸ್ತ್ರೀಧನ** ಎಷ್ಟು ಮುಖ್ಯವಾಗಿತ್ತು ?

ಮೊದಲ ಪ್ರಶ್ನೆಗೆ ಉತ್ತರಗಳು ಸಾಪೇಕ್ಷವಾಗಿ ನೇರಾವಾಗಿದ್ದವು. ಆಭರಣ, ಉಡುಪು, ಪಾತ್ರೆ ಮುಂತಾದವುಗಳನ್ನು ಅಂದರೆ ವೈಯಕ್ತಿಕ ಒಡೆತನ ಕ್ಕೊಳಪಡುವ ವಸ್ತುಗಳನ್ನು **ಸ್ತ್ರೀಧನ** ಒಳಗೊಂಡಿರುತ್ತಿತ್ತಾದರೂ **ಅದರಲ್ಲಿ ಭೂಮಿ ಮಾತ್ರ ಇರಲಿಲ್ಲ.**

ಇದು ಎರಡನೆಯ ಪ್ರಶ್ನೆಗೆ ಸ್ಪಷ್ಟವಾಗಿ ಸಂಬಂಧಿಸಿದೆ. ಪ್ರಾಚೀನ ಭಾರತದ ಒಂದು ಪ್ರಧಾನವಾದ ಆರ್ಥಿಕ ಚಟುವಟಿಕೆಯನ್ನು ಒಂದು ವೇಳೆ ಗುರುತಿಸಬೇಕಾದಲ್ಲಿ ಅದು ಸ್ಪಷ್ಟವಾಗಿ ಕೃಷಿಯೇ ಆಗಿರುತ್ತದೆ. ಕೃಷಿಪ್ರಧಾನ ವ್ಯವಸ್ಥೆಗಳು ಕಾಲಕಾಲಕ್ಕೆ ಮತ್ತು ಪ್ರಾದೇಶಿಕವಾಗಿ ಸಾಕಷ್ಟು ಭಿನ್ನವಾಗಿರುತ್ತವೆ. ಯಾವುದೇ ಕೃಷಿಪ್ರಧಾನ ವ್ಯವಸ್ಥೆಯಲ್ಲಿ ಭೂಮಿಯು ಒಂದು ಅತ್ಯಂತ ಪ್ರಮುಖವಾದ ಸಂಪನ್ಮೂಲವಾಗಿರುತ್ತದೆ. ಒಂದು ವೇಳೆ ಭೂಮಿಯ ಮೇಲಿನ ಹಕ್ಕನ್ನು ಮಹಿಳೆಯರು ಹೊಂದಿರದಿದ್ದಲ್ಲಿ **ಸ್ತ್ರೀಧನ**ಕ್ಕೆ ನಿಜವಾಗಿಯೂ ಹೆಚ್ಚಿನ ಅರ್ಥವಿರುವುದಿಲ್ಲ.

**ಗಣ್ಯಮಹಿಳೆಯರು : ಸ್ಥಾನಮಾನವಾಗಿ ಸಂಪನ್ಮೂಲಗಳ ಪರಿವರ್ತನೆ**

ಇನ್ನೊಂದು ಹಂತದಲ್ಲಿ, ಬಹುಶಃ ಬಿಟ್ಟುಕೊಡಲು ತಮ್ಮ ಬಳಿಸಂಪತ್ತನ್ನು ಹೊಂದಿದ್ದ ಸಮಾಜದ ಮೇಲ್ವರ್ಗದ ಮಹಿಳೆಯರಿಗೆ ಮಾತ್ರ **ಸ್ತ್ರೀಧನ** ದೊರಕುತ್ತಿದ್ದಿರಬಹುದು.

ಅನೇಕ ಸಂದರ್ಭಗಳಲ್ಲಿ **ಧಾರ್ಮಿಕ ಸಂಸ್ಥೆಗಳಿಗೆ ದಾನಮಾಡುವ ಶಕ್ತಿಯನ್ನು ಸ್ಥಾನಮಾನದ ಸಂಕೇತ ಎಂದು ಭಾವಿಸಲಾಗುತ್ತಿ**ತ್ತೆನ್ನುವುದು ನಮಗೆ ತಿಳಿದೇ ಇದೆ. ಇದಕ್ಕೆ ಬಹುಶಃ ಉತ್ತಮ ಉದಾಹರಣೆಗಳೆಂದರೆ. ವೈದಿಕ, ಬೌದ್ಧ ಮತ್ತು ಕಡಿಮೆ ಸಂದರ್ಭಗಳಲ್ಲಿ ಜೈನ ಸಂಸ್ಥೆಗಳಿಗೆ ರಾಜರು ಭೂಮಿಯನ್ನು ದಾನಮಾಡುತ್ತಿದ್ದರು.

**ಮಹಿಳೆಯರು ದಾನಿಗಳಾಗುವ ಸಾಧ್ಯತೆಯನ್ನು ಶಾಸ್ತ್ರಗಳು ಪರಿಗಣಿಸುವುದಿಲ್ಲ.** ಅವರು ಸನ್ಯಾಸಿಗಳಿಗೆ ಮತ್ತು ಭಿಕ್ಷುಕರಿಗೆ ಆಹಾರವನ್ನು ನೀಡುವ ವಿಷಯದಲ್ಲಿ ಮಾತ್ರ ಅದು ಅನ್ವಯಿಸುತ್ತಿರಲಿಲ್ಲವೆಂದು ಕಂಡುಬರುತ್ತದೆ. ಏಕೆಂದರೆ ಇದು ಅವರ ಕೌಟುಂಬಿಕ ಪಾತ್ರಗಳ ವಿಸ್ತರಣೆ ಯಾಗಿದ್ದಿರಬಹುದು. ಏನೇ ಆದರೂ ಭಾರತದ ಉಪಖಂಡದ ಮಥುರಾ, ಸಾಂಚಿ ಮತ್ತು ಅಮರಾವತಿಯಂಥ ವಿವಿಧ ಸ್ಥಳಗಳಲ್ಲಿ ದೊರೆತ ಶಾಸನಗಳು ಮಹಿಳಾ ದಾನಿಗಳು ನೀಡಿದ ಧನಸಹಾಯವನ್ನು ದಾಖಲಿಸುತ್ತವೆ. ಅನೇಕ ಮಹಿಳೆಯರು ಸ್ಥಾನಮಾನಗಳಿಗಾಗಿ ಹಕ್ಕು ಸ್ಥಾಪಿಸಲು ಹಾಗೂ ಕೌಟುಂಬಿಕವಾದ ನಿರ್ದೇಶಿತ ಚೌಕಟ್ಟಿನ ಆಚೆ ಬರಲು ಪ್ರಯತ್ನಿಸುತ್ತಿದ್ದರೆನ್ನುವುದು ಸ್ಪಷ್ಟವಾಗುತ್ತದೆ.

**ಕಾರ್ಮಿಕರಾಗಿ ಮಹಿಳೆಯರು**

ಬಹಳಷ್ಟು ಮಹಿಳೆಯರಿಗೆ (ಬಹಳಷ್ಟು ಮಂದಿ ಪುರುಷರಿಗೂ ಕೂಡ) ಉತ್ಪಾದನಾ ಸಂಪನ್ಮೂಲಗಳ ಮೇಲಿನ ನಿಯಂತ್ರಣದ ಪ್ರಶ್ನೆಯೇ ಇರಲಿಲ್ಲ. ಬದಲಿಗೆ, ಅವರು ಬಹಳಷ್ಟು ಉತ್ಪಾದನಾ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿದ್ದುದನ್ನು ಕಾಣುತ್ತೇವೆ.

ಗ್ರಂಥಗಳು ಮತ್ತು ಶಾಸನಗಳು ದಾಸಿಯರು, ಕೃಷಿಕಾರ್ಮಿಕರು, ನೇಕಾರರ ಬಗ್ಗೆ ಹೇಳುತ್ತವೆ. ಅಂಥ ವರ್ಗಗಳ ಮಹಿಳೆಯರಿಗೆ **ಮುಖ್ಯ ಸವಾಲಾಗಿ ಏನಾದರೂ ಇದ್ದಲ್ಲಿ ಅದು ತಾವು ತಮ್ಮ ದುಡಿಮೆಯ ಪ್ರತಿಫಲಗಳ ಮೇಲೆ ಯಾವ ಮಟ್ಟದ ಹಿಡಿತವನ್ನು ಸಾಧಿಸಬಲ್ಲೆವೆಂದಾಗಿದ್ದಿರ ಬಹುದು.**

ಮಹಿಳೆಯರು ಕ್ರಿಯಾಶೀಲರಾಗಿದ್ದ ಸಂದರ್ಭಗಳು ವೈವಿಧ್ಯಮಯವಾಗಿದ್ದವು ಎನ್ನುವುದನ್ನೂ ಕೂಡ ಗಮನಿಸುವುದು ಮುಖ್ಯ, ಉದಾಹರಣೆಗೆ, ಆರಂಭಿಕ ವೈದಿಕ ಸಾಹಿತ್ಯದಲ್ಲಿ ದಾಸಿಯರ ಬಗ್ಗೆ ಉಲ್ಲೇಖವಿದೆ. ಅವರು ಗ್ರಾಮೀಣ ಕುಟುಂಬಗಳ ಭಾಗವಾಗಿದ್ದಿರ ಬಹುದು. ಅನಂತರದ ಸಾಹಿತ್ಯದಲ್ಲಿ (ಉಲ್ಲೇಖಿತ) ನಗರ ಸಂದರ್ಭಗಳು ಅಥವಾ ದೊಡ್ಡ, ಜಮೀನ್ದಾರ ಕುಟುಂಬಗಳಲ್ಲಿ ಅವರು ಬೇರೆಯೇ ಆದ ಚಟುವಟಿಕೆಗಳು ಮತ್ತು ಮಹತ್ವವನ್ನು ಹೊಂದಿದ್ದಿರ ಬಹುದು.

**ಹೆಚ್ಚಿನ ಐತಿಹಾಸಿಕ ಸಂದರ್ಭಗಳಲ್ಲಿ ಲೈಂಗಿಕ ಶ್ರಮವಿಭಜನೆ ಇತ್ತೆನ್ನುವುದನ್ನು** ಅಂದರೆ ವಿಶಿಷ್ಟವಾದ ಕ್ರಿಯೆಗಳನ್ನು ಪುರುಷರು ಮತ್ತು ಮಹಿಳೆಯರು ಮಾಡಿದ್ದಾರೆ ಅಥವಾ ಮಾಡಬೇಕೆಂದು ನಿರೀಕ್ಷಿಸಲಾಗುತ್ತದೆ ಎನ್ನುವುದನ್ನು ನಾವು ನೆನಪಿನಲ್ಲಿಡುವುದು ಅಗತ್ಯ. ಅದೇ ಸಂದರ್ಭದಲ್ಲಿ ಯಾವ ವಿಶಿಷ್ಟ ಚಟುವಟಿಕೆಗಳನ್ನು ಪುರುಷ ಸಂಬಂಧೀ ಅಥವಾ ಮಹಿಳಾ ಸಂಬಂಧೀ ಎಂದು ಗುರುತಿಸಲಾಗಿದೆಯೋ, ಅವು ಬೇರೆ ಬೇರೆ ಸಂದರ್ಭಗಳಲ್ಲಿ ಬಹಳಷ್ಟು ಭಿನ್ನವಾಗಿರುತ್ತವೆ ಎನ್ನುವುದನ್ನು ಗುರುತಿಸಲಾಗಿದೆ.

**ಉತ್ಪಾದನಾ ಪ್ರಕ್ರಿಯೆಗಳಿಗೆ ಮಹಿಳೆಯರ ಸಂಬಂಧಗಳು ಕೌಟುಂಬಿಕ ರೂಪಗಳ ಶ್ರೇಣಿಯಲ್ಲಿ ರಚಿತವಾಗಿದ್ದರೆ ಅಚ್ಚರಿ ಪಡಬೇಕಿಲ್ಲ.** ಕೌಟುಂಬಿಕ ರೂಪಗಳು ಕಾಲಕಾಲಕ್ಕೆ ಮತ್ತು ಸ್ಥಳದಿಂದ ಸ್ಥಳಕ್ಕೆ ಬೇರೆಯಾಗುತ್ತವೆ. ಈಗಿರುವಂತೆ ಅವು ಬಾಂಧವ್ಯದ ಗಂಟುಗಳ ಮಧ್ಯಸ್ಥಿಕೆಗೊಳಗಾಗಿದ್ದವು. ಅವುಗಳನ್ನು ಸಹಜವಾದವು ಮತ್ತು ಸಾರ್ವತ್ರಿಕವಾದವೆಂದು ಭಾವಿಸುವುದು ನಮಗೆ ರೂಢಿಯಾಗಿದೆ. ಆದರೂ ಬಾಂಧವ್ಯದ ರೂಪಗಳು ಐತಿಹಾಸಿಕವಾಗಿ ಬಹಳಷ್ಟು ಭಿನ್ನತೆಯನ್ನು ತೋರಿಸುತ್ತವೆ. ಅಂಥ ಭಿನ್ನತೆಗಳನ್ನು ಬೆಳಕಿಗೆ ತರಲು ಮತ್ತು ಅವುಗಳ ಮಹತ್ವವನ್ನು ಶೋಧಿಸಲು ನಾವೀಗ ಆರಂಭಿಸಿದ್ದೇವೆ.

**ಪ್ರಾಚೀನ ಭಾರತದಲ್ಲಿ ಕುಲ / ಗೋತ್ರದ ಜಾಡನ್ನು ಪತ್ತೆಮಾಡಲು ಆಚರಣೆಗಳ ಸಾಲೇ ಇದ್ದುದಕ್ಕೆ ಪುರಾವೆಗಳು ನಮಗೆ ದೊರಕಿವೆ :** ಅದು ಸಾಮಾನ್ಯವಾಗಿ ತಂದೆಯ ಮೂಲಕ ಮತ್ತು ಕೆಲವೊಮ್ಮೆ ತಾಯಿಯ ಮೂಲಕ ಗುರುತಿಸಲಾ- ಗುತ್ತಿತ್ತು. ಅಲ್ಲದೆ ಸಂಕೀರ್ಣವಾದ ಬಾಂಧವ್ಯ ವ್ಯವಸ್ಥೆಗಳಿಂದ ಬೆಂಬಲವನ್ನು ಪಡೆಯುತ್ತಿದ್ದುದಕ್ಕೆ ಸೂಚನೆಗಳಿವೆ. ಅಂಥ ವ್ಯವಸ್ಥೆಗಳು ಜಾತಿ/ವರ್ಗ ಮತ್ತು ಪ್ರದೇಶಗಳನ್ನಾಧರಿಸಿ ಭಿನ್ನವಾಗಿರುತ್ತಿದ್ದವು. ನಮ್ಮ ಪುರಾವೆಗಳಲ್ಲಿ ಹೆಚ್ಚಿನವು, ಯಾರು ವಿವರವಾದ ದಾಖಲೆಗಳನ್ನು ನಿರ್ಮಿಸಿ ಅವುಗಳನ್ನು ಜತನ ಮಾಡಿದರೋ, ಅಂಥ ಉನ್ನತ ಸ್ಥಾನಮಾನವುಳ್ಳ ಗುಂಪುಗಳು, ಪುರೋಹಿತರು ಮತ್ತು ಆಳುವ ಗಣ್ಯರಿಗೆ ಸಂಬಂಧಿಸಿವೆಯೆಂದರೆ ಅಚ್ಚರಿಯೆನಿಸುವುದಿಲ್ಲ.

**ಇಲ್ಲಿ ಬಹುಕಾಲ ಮಹತ್ವದ್ದಾಗುವ ಮತ್ತು ಸುಲಭವಾದ ಉತ್ತರವಿಲ್ಲದ ಹಲವು ಸವಾಲುಗಳಿವೆ.**

- **ಮಹಿಳೆಯರು ಆಸ್ತಿಯ ಅಧಿಕಾರವನ್ನು ಹೊಂದಿರುವುದು ಎಷ್ಟು ಮುಖ್ಯ ?**
- **ಉತ್ಪಾದನೆಯಲ್ಲಿ ಭಾಗವಹಿಸುವಿಕೆ ಮತ್ತು ಉತ್ಪಾದನೆಯ ಮೇಲಿನ ನಿಯಂತ್ರಣಗಳ ನಡುವಿನ ಅಂತರವನ್ನು ನಾವು ಹೇಗೆ ತೊಡೆದು ಹಾಕಬಹುದು ?**
- **ಸಂಪನ್ಮೂಲಗಳು ಕುಟುಂಬಗಳಲ್ಲಿ ಹೇಗೆ ಹಂಚಿಕೆಯಾಗುತ್ತವೆ ? ಅವು ಹೇಗೆ ಹಂಚಿಕೆಯಾಗಬೇಕು ?**
- **ಇಂದು ನೀವು ಯಾವುದನ್ನು ಆಸ್ತಿಯ ಒಂದು ಮುಖ್ಯವಾದ ರೂಪ ಎಂದು ಭಾವಿಸುತ್ತೀರಿ ? ಅದರ ಮೇಲಿನ ಅಧಿಕಾರ ಯಾರಿಗಿದೆ ?**

### ಸ್ತ್ರೀ = ಧನ

ಪ್ರಾಚೀನ ವೈಭವದ ಸುಂದರ ಚಿತ್ರವನ್ನು ಹೆಚ್ಚು ಕಡಿಮೆ ಹಾಳುಮಾಡುವ ಇನ್ನೊಂದು ರೀತಿಯ ಸಾಕ್ಷಿ ಕೂಡ ಬೆಳಕಿಗೆ ಬಂದಿದೆ. ಇದು **ಮಹಿಳೆಯರು ಆಸ್ತಿಯಂತೆ** ಎಂಬುದರ ಕುರಿತ ಉಲ್ಲೇಖಗಳಾನ್ನೊಳಗೊಳ್ಳುತ್ತದೆ. ಆ ಉಲ್ಲೇಖಗಳಲ್ಲಿ ಕೆಲವು **ಋಗ್ವೇದದಷ್ಟು** ( 6,27,8) ಹಳೆಯವು. ಅಲ್ಲಿ ದಾನಮಾಡುವ ವಸ್ತುಗಳು. ಗಾಡಿಗಳು ಮತ್ತು ಎತ್ತುಗಳೊಂದಿಗೆ ಮಹಿಳೆಯರನ್ನು ಪಟ್ಟಿಮಾಡಲಾಗಿದೆ. ಈ ಸಂದರ್ಭದಲ್ಲಿ **ವಧು** ಎಂಬ ಶಬ್ದವನ್ನು ಮಹಿಳೆಯರಿಗೆ ಬಳಸಲಾಗಿದೆ. ಇದು ಮದುಮಗಳಿಗೆ ಬಳಸುವ ಶಬ್ದವಾಗಿದ್ದು ಮಹಿಳೆಯರ ಸ್ಥಾನಮಾನಕ್ಕೆ ಹಿಡಿದ ಕನ್ನಡಿಯಾಗಿದೆ. ಪ್ರಾಸಂಗಿಕವಾಗಿ **ವಧು, ವಿವಾಹ** ಮುಂತಾದ ಶಬ್ದಗಳು ( ಹಲವು ಭಾರತೀಯ ಭಾಷೆಗಳಲ್ಲಿ ಮದುವೆಗೆ **ವಿವಾಹ** ಶಬ್ದಗಳು ಬೇರೆ ಬೇರೆ ರೂಪಗಳನ್ನು ಸಾಮಾನ್ಯವಾಗಿ ಬಳಸಲಾಗುತ್ತದೆ) **'ವಾಹ್'** ಮೂಲದಿಂದ ಬಂದಿವೆ. ಅದು ತೆಗೆದುಕೊಂಡು ಹೋಗು ಎನ್ನುವ ಅರ್ಥವನ್ನು ಹೊಂದಿದೆ. ಅಂಥ ಸಂದರ್ಭದಲ್ಲಿ ಮುಖ್ಯಘಟನೆಯು ವಧುವನ್ನು ತವರಿನಿಂದ ಕರೆದುಕೊಂಡು ಹೋಗುವುದಾಗಿದ್ದು ಅದರ ಕಡೆಗೆ ಗಮನವನ್ನು ಸೆಳೆಯುತ್ತದೆ.

ಮಹಿಳೆಯರು ಆಸ್ತಿಯ ಹಾಗೆ ಎನ್ನುವ ಭಾವನೆ ಮುಂದುವರಿದು ಅನಂತರದ ಗ್ರಂಥಗಳಲ್ಲಿ ಸಾಮಾನ್ಯವಾಗಿ ವ್ಯಕ್ತವಾಗಿವೆ. ಉದಾಹರಣೆಗೆ, **ಮನುಸ್ಮೃತಿಯಲ್ಲಿ** ( 8.149) ಪಿತೃವಂಶೀಯ/ಸಂತಾನದ ಉತ್ತರಾಧಿಕಾರದ ಭಾಗವಾಗಿ ರವಾನಿಸಬೇಕಾದ ಸಂಪನ್ಮೂಲಗಳ ಪಟ್ಟಿಯಲ್ಲಿ ಮಹಿಳೆಯರನ್ನು ಸೇರಿಸಲಾಗಿದೆ. ಅಂದಮೇಲೆ ಮಹಿಳೆಯರನ್ನು ಸಂಪನ್ಮೂಲಗಳೆಂದು ಏಕೆ ಪರಿಗಣಿಸಲಾಗಿತ್ತೆಂದು ಕೇಳುವ ಅಗತ್ಯವಿದೆಯೇ ?

### ಸಂತಾನೋತ್ಪತ್ತಿ

**ಮಹಿಳೆಯರನ್ನು ಸಂಪನ್ಮೂಲಗಳೆಂದು ಭಾವಿಸಲು ಕಾರಣಗಳಲ್ಲೊಂದೆಂದರೆ, ಸಂತಾನೋತ್ಪಾದನೆಗೆ ಅವರು ಸಂಪೂರ್ಣವಾಗಿ ಅಗತ್ಯವಾಗಿದ್ದರು** (ಆಗಿದ್ದಾರೆ). ಮುಟ್ಟು, ಸಂಭೋಗ, ಗರ್ಭಧಾರಣೆ ಮತ್ತು ಹೆರಿಗೆಯಂಥ ದೈಹಿಕ ಪ್ರಕ್ರಿಯೆಗಳು ಒಂದು ಹಂತದಲ್ಲಿ ಸಹಜವಾದವು, ಏನೇ ಆದರೂ ಅವು ಯಾವುದೋ ಸಾಮಾಜಿಕ ಸಂದರ್ಭದಲ್ಲಿ ಅರ್ಥಗಳನ್ನು ಪಡೆದುಕೊಳ್ಳುತ್ತವೆ. ಅವುಗಳನ್ನು ವಿಭಿನ್ನವಾಗಿ ಚಿತ್ರಿಸಲಾಗಿದೆ ಮತ್ತು ಅರ್ಥ ಮಾಡಿಕೊಳ್ಳಲಾಗಿದೆ ; ಅದು ಸಾಧ್ಯವೂ ಹೌದು.

ಪ್ರಾಚೀನ ಭಾರತದ ಸಂದರ್ಭದಲ್ಲಿ ಬ್ರಾಹ್ಮಣ ಸಂಪ್ರದಾಯ/ಪರಂಪರೆಯಲ್ಲಿ ಇದು ಎಷ್ಟು ಪರಿಣಾಮಕಾರಿಯಾಗಿತ್ತೆನ್ನುವುದನ್ನು ನೋಡೋಣ.

- ಎದ್ದು ಕಾಣುವ ಕೆಲವು ದೈಹಿಕ ಪ್ರಕ್ರಿಯೆಗಳು, ಅದರಲ್ಲೂ ವಿಶೇಷವಾಗಿ ಮಹಿಳೆಯರಿಗೆ ಸಂಬಂಧಿಸಿದವುಗಳು ಅಪಮೌಲ್ಯೀಕರಣಗೊಂಡಿವೆ. ಉದಾಹರಣೆಗೆ, ಮುಟ್ಟು ಮಲಿನಕಾರಿ ಎಂದು ಭಾವಿಸಲಾಗುತ್ತದೆ. ಶಿಶುಜನನಕ್ಕಾದಂತೆಯೇ ಹೆಚ್ಚುಕಡಿಮೆ ಸವಿವರವಾದ ನಿಷೇದಗಳ ಸಾಲಿನಲ್ಲಿ ಸೇರಿಸಿಕೊಳ್ಳಲಾಗಿತ್ತು.

- ಅದೇ ಸಂದರ್ಭದಲ್ಲಿ, ವಿಶೇಷವಾಗಿ ಗಂಡುಮಕ್ಕಳ ಜನನದ ಆಶ್ವಾಸನೆಗಾಗಿ ನಡೆಸುವ **ಪುಂಸವನ**ದಂಥ ಆಚರಣೆಗಳಿಗೆ ಕಟ್ಟಳೆಗಳಿರುವುದನ್ನು ಕಾಣುತ್ತೇವೆ.

- ಮೊದಲ ಮೂರು **ವರ್ಣ**ಗಳ ಗಂಡು ಮಕ್ಕಳು ಮತ್ತು ಪುರುಷರಿಗೆ ವಿಧಿಸಲಾದ **ಉಪನಯನ** ದಂಥ ಸಂಸ್ಕಾರಗಳು ಇನ್ನೊಂದು ಸಂಸ್ಕಾರಕ್ಕೆ ಅಥವಾ ದೈವಿಕ / ಅಧ್ಯಾತ್ಮಿಕ ಪುನರ್ಜನ್ಮವನ್ನು ಹೊಂದಲು ನೆರವಾಗುತ್ತದೆಂದು ಭಾವಿಸಲಾಗಿತ್ತು. (ಆದ್ದರಿಂದ ಎರಡು ಬಾರಿ ಹುಟ್ಟು ಎಂಬ ಅರ್ಥದ **'ದ್ವಿಜ'** ಎಂಬ ಶಬ್ದ(ಉದಾಹರಣೆಗೆ, **ಮನುಸ್ಮೃತಿ**:೩ 146 - 148). ಇದನ್ನು "ಕೇವಲ" ದೈಹಿಕ ಹುಟ್ಟಾದ ತಾಯಿಯ ಗರ್ಭದಿಂದ ಹುಟ್ಟುವುದಕ್ಕಿಂತ ಮೇಲು ಎಂದು ಭಾವಿಸಲಾಗಿತ್ತು.

ಸ್ಪಷ್ಟವಾಗಿ ಅಂಥ ಕಟ್ಟಳೆಗಳು ಮತ್ತು ಅಭಿಪ್ರಾಯಗಳು ಮಹಿಳೆಯರನ್ನು ಎರಡನೆಯ ದರ್ಜೆಯವರೆಂದು ಪರಿಗಣಿಸುವ ಒಂದು ಸಾಮಾಜಿಕ ಪರಿಸರ ನಿರ್ಮಾಣವಾಗಲು ತಮ್ಮದೇ ಪಾತ್ರವನ್ನು ವಹಿಸಿದ್ದಿರಬಹುದು. ಆ ಸಂದರ್ಭದಲ್ಲಿ ಅವರ ಮೇಲೆ ನಡೆಯುವ ದೌರ್ಜನ್ಯವು ಕಾನೂನುಬದ್ಧವೆಂದು ಹೇಳಿಲ್ಲದಿದ್ದರೂ ಅದಕ್ಕೆ ಅವ್ಯಕ್ತ ಕ್ಷಮಾಪಣೆಯಿದ್ದಿರಬಹುದು.

ಒಂದು ವೇಳೆ ಅಂಥ ಅಭಿಪ್ರಾಯಗಳು ಸಾರ್ವತ್ರಿಕವಾಗಿ ಒಪ್ಪಿತವಾಗಿದ್ದರೆ. ದೃಶ್ಯ ಘೋರವಾಗಿ ಬಿಡುತ್ತಿತ್ತೇನೋ, ಆದ್ದರಿಂದ ಅಂಥ ಅಭಿಪ್ರಾಯಗಳು ಮತ್ತು ಆಚರಣೆಗಳನ್ನು ಹೇರುವುದಕ್ಕೆ ಪ್ರತಿರೋಧವಿತ್ತೆಂದು ಹೇಳಬಹುದೆ? ಈ ಕೆಳ ಕಂಡವುಗಳನ್ನು ಪರ್ಯಾಲೋಚಿಸಿ :

ಗ್ರಂಥಗಳಲ್ಲಿ ವಿಧಿಸಿರುವ ಮಾದರಿ / ಪ್ರಮಾಣಗಳನ್ನು "ಉಲ್ಲಂಘಿಸಿದ" ಸಾಮಾಜಿಕ ವರ್ಗಗಳ ಉದ್ದವಾದ ಪಟ್ಟಿಗಳನ್ನೇ ಶಾಸ್ತ್ರಗ್ರಂಥಗಳು ಕೊಡುತ್ತವೆ. ಆ ಪಟ್ಟಿಗಳಲ್ಲಿ ಉಪನಯನವನ್ನು ಆಚರಿಸಿದ ಅಥವಾ ವೈದಿಕ ಬಲಿಗಳನ್ನು ಕೊಡುವುದನ್ನು ಕಡೆಗಣಿಸಿದ ಅಥವಾ ಮಾಲಿನ್ಯದ "ನಿಯಮ"ಗಳನ್ನು ಪಾಲಿಸದ ಕುಟುಂಬಗಳು ಹಾಗೂ ಮಾದರಿ ಕುಟುಂಬಗಳಿಗೆ "ಸರಿಹೊಂದ"ದಿರುವ ವೇಶ್ಯೆಯರು ಮತ್ತು ಸನ್ಯಾಸಿನಿಯರಂಥ ಮಹಿಳೆಯರು ಸೇರಿರುತ್ತಿದ್ದರು. ಇವರನ್ನೆಲ್ಲಾ ಗ್ರಂಥಗಳು ತಪ್ಪದೆ ಖಂಡಿಸುತ್ತವೆ. ಈ ಪಟ್ಟಿಗಳಿಂದ (ಸಾಮಾಜಿಕ) ಮಾದರಿಗಿಂತ ಬೇರೆಯೇ ಆದ ಪುರುಷರು ಮತ್ತು ಮಹಿಳೆಯರು ಇದ್ದರೆನ್ನುವುದನ್ನು ತಿಳಿಯಬಹುದು.

❖ ಆದರ್ಶ ವಿವಾಹವೆಂದು ಭಾವಿಸುವುದರ ಹೊರಗೆ ಮಕ್ಕಳು ಹುಟ್ಟುವ ಸಾಧ್ಯವಿದೆಯೆನ್ನುವುದನ್ನು ಹೆಚ್ಚು ಕಡಿಮೆ ಇಷ್ಟವಿಲ್ಲದೆ ಗುರುತಿಸಲಾಗಿದೆ. ಆದರ್ಶ ವಿವಾಹವೆನ್ನುವುದು ಒಂದೇ **ವರ್ಣ**ಕ್ಕೆ ಸೇರಿದ ಒಬ್ಬ ವಯಸ್ಕ ಪುರುಷ ಮತ್ತು ಕನ್ಯೆಯಾದ ಯುವತಿಗೆ ನಡೆಯುವ ವಿವಾಹದಲ್ಲಿ ವಧುವನ್ನು '**ಕನ್ಯಾದಾನ**ದಲ್ಲಿ' ಆದರ್ಶವಾಗಿ ಕೊಟ್ಟಿರಲಾಗುತ್ತದೆ.

❖ ವಾಸ್ತವದಲ್ಲಿ ಹೆಚ್ಚಿನ ಗ್ರಂಥಗಳು ವಿವಾಹದಲ್ಲಿ ಎಂಟು ರೂಪಗಳನ್ನು ಗುರುತಿಸುತ್ತವೆ. ಇವುಗಳ ವಿವರಗಳು ನಮಗೆ ಮುಖ್ಯವಾಗಬೇಕಿಲ್ಲ. (ಆದರೆ ವಿವಾಹದ) ಆಚರಣೆಗಳು ಮತ್ತವುಗಳ ಅನುಷ್ಠಾನದಲ್ಲಿ ವೈವಿಧ್ಯಗಳಿದ್ದವೆನ್ನುವುದು ನಮಗೆ ತಿಳಿದುಬರುತ್ತದೆ. **ಬ್ರಾಹ್ಮಣರು ಕನ್ಯಾದಾನ**ದಂಥ ವಿವಾಹ ರೂಪಗಳಿಗೆ ಆದ್ಯತೆ ನೀಡುತ್ತಿದ್ದರೆಂದರೆ ಆಚ್ಚರಿಯಾಗುವುದಿಲ್ಲ. 'ಕನ್ಯಾದಾನ' ಎಂದರೆ ಮಹಿಳೆಯರ ಲೈಂಗಿಕತೆ ಮತ್ತು ಸಂತಾನೋತ್ಪತ್ತಿಯ ಸಾಮರ್ಥ್ಯಗಳ ಮೇಲೆ ಸಂಪೂರ್ಣ ಹತೋಟಿ ಎಂದರ್ಥ.

## "ಕ್ಷೇತ್ರ", "ಒಡೆಯ" ಮತ್ತು "ಬೀಜ"

ಮನಸ್ಮೃತಿ ಮತ್ತಿತರ ಶಾಸ್ತ್ರಗಳು ಸಂತಾನೋತ್ಪತ್ತಿಯಲ್ಲಿ ಗಂಡ ಮತ್ತು ಹೆಂಡತಿಯರ ಪಾತ್ರಗಳನ್ನು **ಕ್ಷೇತ್ರ** ಮತ್ತು **ಬೀಜ**ಗಳ ಸಾದೃಶ್ಯದ ಮೂಲಕ ಆಗಾಗ "ವಿವರಿಸುತ್ತವೆ" ಮಹಿಳೆಯು ಬೀಜವನ್ನು ಬಿತ್ತಲು (ಇರುವ) ನಿಷ್ಕ್ರಿಯ ಕ್ಷೇತ್ರ; ಮಗುವಿನ ಸ್ವಭಾವ ಬೀಜವನ್ನವಲಂಬಿಸಿರುತ್ತದೆ; ಕ್ಷೇತ್ರಕ್ಕೆ ಗೊತ್ತುಪಡಿಸಿದ ಪೋಷಿಸುವ ಪಾತ್ರಕ್ಕೆ ವಿರುದ್ಧವಾಗಿ ಬೀಜವು ಪ್ರಧಾನವಾದ ಪಾತ್ರವನ್ನು ಹೊಂದಿದೆ. ಗಂಡನನ್ನು ಕ್ಷೇತ್ರದ(**ಕ್ಷೇತ್ರಿನ್**) ಒಡೆಯ ಎಂದು ಉಲ್ಲೇಖಿಸಲಾಗಿದೆ. ಒಂದುವೇಳೆ ಅನ್ಯ ಪುರುಷರು ಕ್ಷೇತ್ರ /ಹೆಂಡತಿಯಲ್ಲಿ ತಮ್ಮ ಬೀಜಗಳನ್ನು ಬಿತ್ತಿದರೂ, ಹುಟ್ಟುವ ಸಂತತಿ ಒಡೆಯ/ಗಂಡನಿಗೆ ಸೇರುತ್ತದೆಂದು ಸೂಚಿಸುವಷ್ಟು ಮುಂದುವರಿಯುತ್ತವೆ.

### ರಕ್ತ ಹಂಚಿಕೆ ಬಂಧನವಾಗಿ

ಮೇಲೆ ಹೇಳಿದ ಬ್ರಾಹ್ಮಣ ಸಂಬಂಧೀ ಅಭಿಪ್ರಾಯಕ್ಕೆ ವಿರುದ್ಧವಾಗಿ ಇಂದಿನ ತಮಿಳು ನಾಡಿನ ಬ್ರಾಹ್ಮಣೇತರ ಜನಾಂಗಗಳ ಅಭಿಪ್ರಾಯವನ್ನು ನೋಡೋಣ. ಅವರ ಪ್ರಕಾರ ಮಗುವಿಗೆ ತಾಯಿಯ ತಮ್ಮನು ತಂದೆಗಿಂತಲೂ ಹತ್ತಿರದವನಾಗುತ್ತಾನೆ. ಏಕೆಂದರೆ, ತಾಯಿ ಮತ್ತವಳ ಸೋದರ ಒಂದೇ ರಕ್ತ / ಹುಟ್ಟನ್ನು ಹಂಚಿಕೊಂಡಿರುತ್ತಾರೆ. ಅಲ್ಲದೆ ಮಗು ತಾಯಿಯ ಗರ್ಭದಲ್ಲಿ ಅವಳ ರಕ್ತದಿಂದ ಪೋಷಣೆ ಪಡೆದು ಒಂಬತ್ತು ತಿಂಗಳನ್ನು ಕಳೆಯುತ್ತದೆ.

ನೀವೇ ತಿಳಿದಿರುವಂತೆ ಮಗುವಿನ ಹುಟ್ಟನ್ನು ನಾವು ಅರ್ಥಮಾಡಿಕೊಳ್ಳುವ / ಪರಿಭಾಷಿಸುವ ರೀತಿಯೇ ಮಗುವಿಗೆ ಸಾಮಾಜಿಕ ಹಕ್ಕುಗಳನ್ನು ಸೃಷ್ಟಿಸುತ್ತವೆ. ಆ ಮಗು ಸಂಬಂಧಿಸುವುದು ತಾಯಿಗೋ, ತಂದೆಗೋ, ಇಬ್ಬರಿಗೋ, ಅಥವಾ ವ್ಯಾಪಕವಾದ ಇಡೀ ಸಾಮಾಜಿಕ ವ್ಯವಸ್ಥೆಗೋ ?

**ಸಂಕ್ಷಿಪ್ತವಾಗಿ**

❖ ಬೆರಳೆಣಿಕೆಯಷ್ಟು ಗಣ್ಯ ಮಹಿಳೆಯರು ಸ್ತ್ರೀಧನವನ್ನೊಳಗೊಂಡಂತೆ ಆಸ್ತಿಯನ್ನು ಪಡೆದುಕೊಳ್ಳಬಲ್ಲವರಾಗಿದ್ದರು ; ಕೆಲವು ಪ್ರಕರಣಗಳಲ್ಲಿ ಇದನ್ನು ಉಡುಗೊರೆಯಾಗಿ ಕೊಡಲು ಮತ್ತು ಸ್ಥಾನಮಾನವನ್ನು ಪಡೆದುಕೊಳ್ಳಲು ಬಳಸುತ್ತಿದ್ದರು.

❖ ಬಹಳಷ್ಟು ಮಂದಿ ಮಹಿಳೆಯರು ಹೆಚ್ಚಿನ ಉತ್ಪಾದನಾ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು ; ಆದರೆ ಅವುಗಳ ಮೇಲೆ ಅವರಿಗೆ ನಿಯಂತ್ರಣವಿರಲಿಲ್ಲ.

❖ ವಿಶೇಷವಾಗಿ ಮೇಲ್ಜಾತಿ/ವರ್ಗದ ಪುರುಷರ ಮುಖ್ಯ ಕಾಳಜಿ ಮಹಿಳೆಯರ ಲೈಂಗಿಕತೆ ಮತ್ತು ಸಂತಾನೋತ್ಪತ್ತಿಯ ಸಾಮರ್ಥ್ಯಗಳನ್ನು ನಿಯಂತ್ರಿಸುವುದಾಗಿತ್ತು.

❖ ಆದರೆ ಪ್ರತಿಯೊಬ್ಬರೂ ಹಾಗಿರಲಿಲ್ಲ ಎಂದು ನಾವು ಹೇಳಬಹುದು.

**ಮಹಿಳೆಯರು ಮತ್ತು ಕಲಿಕೆಯ ಸಂಪ್ರದಾಯಗಳು ಋಗ್ವೇದದಿಂದ ಪುರಾವೆ :**

**ಬೆರಳೆಣಿಕೆಯ ಮಹಿಳಾ ದಾರ್ಶನಿಕರು**

ವೇದ ಸ್ತೋತ್ರಗಳ ರಚನಕಾರರಾದ ಮಹಿಳಾ ದಾರ್ಶನಿಕರನ್ನು ಮಹಿಳೆಯರ ಸ್ಥಾನಮಾನದ ಸಂಕೇತಗಳಾಗಿ ಮತ್ತೆ ಮತ್ತೆ ನಮಗೆ ತೋರಿಸಲಾಗುತ್ತದೆ. ಮಹಿಳೆಯರಿಗೆ ಸ್ತೋತ್ರಗಳನ್ನು ರಚಿಸುವುದು ಸಾಧ್ಯವಾಗಿತ್ತು ಮತ್ತು ಅವರು ರಚಿಸಿದರು ಎನ್ನುವುದನ್ನು ಮಹಿಳೆಯರಿಗೆ ಶಿಕ್ಷಣ ದೊರಕುತ್ತಿತ್ತೆನ್ನುವುದರ ದ್ಯೋತಕ ಎಂದು ಭಾವಿಸಲಾಗುತ್ತದೆ. ಬಹುಶಃ ಈ ಪರಿಸ್ಥಿತಿ ಸಂಕೀರ್ಣವಾಗಿದೆ.

❖ ಋಗ್ವೇದದ ಈಗಿನ ಸ್ವರೂಪದಲ್ಲಿ ಒಂದು ಸಾವಿರಕ್ಕಿಂತಲೂ ಹೆಚ್ಚು ಸ್ತೋತ್ರಗಳಿವೆ.

❖ ಇವುಗಳಲ್ಲಿ ಸುಮಾರು ಹನ್ನೆರಡು ಅಥವಾ ಇನ್ನು ಕೆಲವರ ಪ್ರಕಾರ ಹದಿನೈದು ಸ್ತೋತ್ರಗಳನ್ನು ಮಹಿಳಾ ದಾರ್ಶನಿಕರು ರಚಿಸಿದರು ಎಂದು ಸಾಂಪ್ರದಾಯಿಕವಾಗಿ ಹೇಳಲಾಗಿದೆ.

ನಮಗೇ ಅನ್ನಿಸುವಂತೆ ಆ ಗ್ರಂಥದ ಗಾತ್ರದ ಸುಮಾರು ಶೇಕಡ ಒಂದರಷ್ಟು ಮಾತ್ರವಿದೆ. ನಿಶ್ಚಿತವಾಗಿಯೂ ಇದು ಲಿಂಗ ಸಮಾನತೆಯ ಪರಿಸ್ಥಿತಿಯಿಂದ ಬಹಳ ದೂರವಿದೆ.

ನಾವು ಪ್ರಸಿದ್ಧ ಗಾರ್ಗಿಯ ವಿವರಗಳ ಕಡೆ ಕಣ್ಣು ಹಾಯಿಸಿದರೆ, ಮಹಿಳೆಯರು ತಮ್ಮನ್ನು ಕಲಿಕೆಯಿಂದ ದೂರವಿಡುವುದರ ವಿರುದ್ಧ ಪ್ರತಿರೋಧವನ್ನೊಡ್ಡಲು ಪ್ರಯತ್ನಿಸುತ್ತಿದ್ದರೆನ್ನುವುದು ಹಾಗೂ ಲಿಂಗಸಮಾನತೆ ಇರಲಿಲ್ಲವೆನ್ನುವುದು ಧೃಡವಾಗುತ್ತದೆ. ಬೃಹದಾರಣ್ಯಕ ಉಪನಿಷತ್ತಿನ (3.6.1) ಉಲ್ಲೇಖಗಳಿಂದ ಗಾರ್ಗಿಯೊಬ್ಬ ಪಂಡಿತೆಯಾಗಿದ್ದಳೆನ್ನುವುದರಲ್ಲಿ ಸಂದೇಹವೇ ಇಲ್ಲ. ಅವಳು ತನ್ನ ಕಾಲದ ಪ್ರಸಿದ್ಧ ತತ್ವಜ್ಞಾನಿಯೊಂದಿಗೆ ವಾದಿಸಿದಳೆಂದು ಗ್ರಂಥದಲ್ಲಿ ದಾಖಲಾಗಿದೆ. ಆದರೆ ಅಲ್ಲಿ ಲಿಂಗಸಮಾನತೆಯ ಬಗ್ಗೆ ಯಾವುದೇ ಸುಳಿವು ದೊರಕುವುದಿಲ್ಲ. ವಾಸ್ತವದಲ್ಲಿ ಯಾಜ್ಞವಲ್ಕ್ಯರೊಡನೆ ತರ್ಕಿಸಿದ ಆರುಮಂದಿ ಚರ್ಚಾಕಾರರಲ್ಲಿ ಗಾರ್ಗಿಯೊಬ್ಬಳೇ ಮಹಿಳೆಯಾಗಿದ್ದಳು. ಗಾರ್ಗಿ ಮತ್ತು ಯಾಜ್ಞವಲ್ಕ್ಯರ ನಡುವಿನ ಚರ್ಚೆ ಧಿಡೀರನೆ ಮುಕ್ತಾಯಗೊಳ್ಳುತ್ತದೆ. ಗಾರ್ಗಿಯು ಯಾಜ್ಞವಲ್ಕ್ಯರ ಮುಂದಿಟ್ಟ ಪ್ರಶ್ನೆಗಳು ಹೆಚ್ಚೆಚ್ಚು ಸೂಕ್ಷ್ಮ ಮತ್ತು ತೀಕ್ಷ್ಣವಾಗುತ್ತಿದ್ದಂತೆ, ಅವರು ಗಾರ್ಗಿಗೆ, "ಬೇಡ, ಓ ಗಾರ್ಗಿ, ನಿನ್ನ ತನಿಖೆಯನ್ನು ಇನ್ನೂ ಮುಂದುವರಿಸಬೇಡ. ಇಲ್ಲವಾದಲ್ಲಿ ನಿನ್ನ ತಲೆ ಉರುಳಿ ಹೋದೀತು !" ಎಂದು ಹೇಳಿ ಚರ್ಚೆಯನ್ನು ಮುಗಿಸುತ್ತಾರೆ.

ಆನಂತರ ಗಾರ್ಗಿ ಮೌನವಾದಳು. ಉಳಿದ ಚರ್ಚಾಕಾರರು ತಮ್ಮಷ್ಟಕ್ಕೆ ತಾವೇ ಮೌನವಾದರು. ತನ್ನ ಪ್ರಶ್ನೆಗಳನ್ನು ಬಹುದೂರಕ್ಕೆ ಕೊಂಡೊಯ್ಯುವುದರ ಪರಿಣಾಮಗಳ ಬಗ್ಗೆ ಅವಳಿಗೆ ಎಚ್ಚರಿಕೆ ನೀಡಲಾಗಿತ್ತು.

**ವೈದಿಕ ಜ್ಞಾನದ ಸಂವಹನ : ಮಹಿಳೆಯರಿಗೆ ಬಹಿಷ್ಕಾರ**

ಸುಮಾರು ಕ್ರಿಸ್ತಪೂರ್ವ 6ನೇ ಶತಮಾನದಿಂದೀಚೆಗೆ ಬಂದ ಗ್ರಂಥಗಳು (**ಧರ್ಮಸೂತ್ರಗಳು** ಮತ್ತು ಅನಂತರದ **ಧರ್ಮಶಾಸ್ತ್ರಗಳು**) ವೈದಿಕ ಜ್ಞಾನದ ಸಂವಹನೆಯನ್ನು ಕುರಿತಂತೆ ನಿಯಮಗಳನ್ನು ಹೇರಿವೆ. ಇವು ದೀಕ್ಷೆ ಅಂದರೆ **ಉಪನಯನ** ಮತ್ತು ವಿದ್ಯಾರ್ಜನೆಯ ಅವಧಿಯಾದ **ಬ್ರಹ್ಮಚರ್ಯ** ಆಚರಣೆಗಳಿಗೆ ಸಂಬಂಧಿಸಿವೆ. **ಮಹಿಳೆಯರ (ಮತ್ತು ಶೂದ್ರರು)ನ್ನು ಉಪನಯನ ಮತ್ತು ಬ್ರಹ್ಮಚರ್ಯಗಳಿಂದ ಹೊರಗಿಡಲಾಗಿತ್ತು.** ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಈ ವರ್ಗ/ಗುಂಪುಗಳಿಗೆ ಕಾನೂನು ಬದ್ಧವಾದ ವೈದಿಕ ಕಲಿಕೆಯ

ಅಧಿಕಾರ ಇರಲಿಲ್ಲ. ಈಗಿರುವಂತೆ ಯಾವುದನ್ನು ಘನವಾದ, ಪವಿತ್ರವಾದ ಪಾಂಡಿತ್ಯಗಳೆಂದು ಪರಿಗಣಿಸಲಾಗಿತ್ತೋ, ಅವುಗಳ ರಚನೆ, ಸಂರಕ್ಷಣೆ ಮತ್ತು ಸಂವಹನದಲ್ಲಿ ಅವರು ಕೇವಲ ಅವುಗಳ ಗಡಿಯ ಅಂಚಿನಲ್ಲಿದ್ದರು.

**ವಿವಾಹ ಒಂದು ಪ್ರತಿನಿದಾನ !**

ಅಲ್ಲದೆ ಈ ಬಹಿಷ್ಕಾರ ವಿವಾಹಕ್ಕೆ ಒತ್ತು ನೀಡಿರುವುದಕ್ಕೆ ಸಂಬಂಧಿಸಿದೆ. ಅದು ಉತ್ಪಾದನೆ ಮತ್ತು ಸಂತಾನೋತ್ಪತ್ತಿಗಳಲ್ಲಿ ಮಹಿಳೆಯರ ಭಾಗವಹಿಸು-ವಿಕೆಯನ್ನು ಸಂರಚಿಸಿರಬಹುದು. **ಪುರುಷರಿಗೆಂದಿರುವ ಉಪನಯನಕ್ಕೆ ಮಹಿಳೆಯರಿಗಿರುವ ವಿವಾಹ ಸಮಾನವಾದುದು** ಎಂದು **ಮನುಸ್ಮೃತಿ(2.67) ಹೇಳುತ್ತದೆ.** ಪತಿಯ ಸೇವೆ ಮಾಡುವುದು ಬ್ರಹ್ಮಚರ್ಯ ಪಾಲನೆಗೆ(ಪುರುಷರಲ್ಲಿ ಬ್ರಹ್ಮಚರ್ಯಕ್ಕೆ ಒತ್ತು ಕೊಟ್ಟಿದ್ದರೆ, ಅದಕ್ಕೆ ವಿರುದ್ಧವಾಗಿ ಮಹಿಳೆಯರು ಲೈಂಗಿಕ ಮತ್ತಿತರ ಸೇವೆಗಳನ್ನು ಮಾಡುವುದಕ್ಕೆ ಒತ್ತು ನೀಡಿರುವುದು ಒಂದು ವಿಪರ್ಯಾಸ) ಸಮವಾದುದೆಂದು ಪರಿಗಣಿಸಲಾಗಿತ್ತು. ಕೌಟುಂಬಿಕ ಕರ್ತವ್ಯಗಳನ್ನು ನಿರ್ವಹಿಸುವುದು **ಬ್ರಹ್ಮಚಾರಿ**ಯಿಂದ ನಿರೀಕ್ಷಿಸುವ ಪವಿತ್ರ ಅಗ್ನಿಯ ಪೂಜೆಗೆ ಸಮವೆಂದು ಭಾವಿಸಲಾಗಿತ್ತು.

**ಪರ್ಯಾಯ ಸಂಪ್ರದಾಯಗಳು : ಬೌದ್ಧ ಧರ್ಮ ಮತ್ತು ಜೈನಧರ್ಮ**

ಪ್ರಾಚೀನ ಭಾರತದಲ್ಲಿ ನಮ್ಮ ಅದೃಷ್ಟಕ್ಕೆ ಕೆಲವು ಪರ್ಯಾಯ ಸಂಪ್ರದಾಯಗಳು ಅಸ್ತಿತ್ವದಲ್ಲಿದ್ದವು. ಇವುಗಳಲ್ಲಿ ಬೌದ್ಧ ಧರ್ಮ ಮತ್ತು ಜೈನ ಧರ್ಮಗಳು ಸೇರಿಕೊಂಡಿದ್ದವು ಸಾಮಾನ್ಯವಾಗಿ ಹೆಚ್ಚಿನ ಪ್ರಧಾನ ಮತ್ತು ಸಂಸ್ಥೀಕರಣಗೊಂಡ ಧಾರ್ಮಿಕ ಸಂಪ್ರದಾಯಗಳಲ್ಲಿ-ರುವಂತೆ, ಇವುಗಳಲ್ಲಿ ಮಹಿಳಾದ್ವೇಷದ ಎಳೆ ಎದ್ದು ಕಾಣುವಂತಿತ್ತು. **ಆದಾಗ್ಯೂ, ಪ್ರಪಂಚವನ್ನು ತ್ಯಜಿಸುವ ಸಾಧ್ಯತೆಗಳು ಮಹಿಳೆಯರಿಗೂ ಇವೆಯೆನ್ನುವುದನ್ನು ಒಪ್ಪಿಕೊಂಡು ಅವರಿಗೂ ಮುಕ್ತ ಅವಕಾಶಗಳನ್ನು ಕೊಟ್ಟವು.**

❖ ಬೌದ್ಧಧರ್ಮ ಮತ್ತು ಜೈನಧರ್ಮಗಳೆರಡೂ ಸನ್ಯಾಸಿನಿಯರ ಶ್ರೇಣಿಗೆ ಅವಕಾಶವನ್ನು ಕಲ್ಪಿಸಿದವು. ಅವರ ಅಸ್ತಿತ್ವವನ್ನು ಗ್ರಂಥಗಳು ಮತ್ತು ಮಥುರಾ ಮತ್ತು ಸಾಂಚಿಯಂಥ ನಿವೇಶನಗಳಲ್ಲಿ ದೊರಕಿದ ಶಾಸನಗಳು ದೃಢೀಕರಿಸುತ್ತವೆ.

❖ ಈ ಮಹಿಳೆಯರಲ್ಲಿ ಕೆಲವರು ಪಂಡಿತರು ಮತ್ತು ಬೋಧಕರಾದರು.

**ಥೇರಿಗಾಥಾ**

ಬೌದ್ಧ ಸಂಪ್ರದಾಯವು **ಥೇರಿಗಾಥಾ** ಎಂಬ ವಿಶಿಷ್ಟ ಗ್ರಂಥವನ್ನು ಸಂರಕ್ಷಿಸಿದೆ. ಇದು ಪದ್ಯಗಳ ಸಂಗ್ರಹ. ಹಿರಿಯ ಸನ್ಯಾಸಿನಿಯರು (**ಥೇರೀಸ್**) ತಮಗೆ ಜ್ಞಾನೋದಯವಾದ ಸಂದರ್ಭದಲ್ಲಿ ಆಚರಿಸಿದ ಸಮಾರಂಭದಲ್ಲಿ ರಚಿಸಿದರು ಎನ್ನಲಾಗಿದೆ. ಈ ಗ್ರಂಥದಲ್ಲಿ ಎಪ್ಪತ್ತಕ್ಕಿಂತಲೂ ಹೆಚ್ಚು ಪದ್ಯಗಳಿವೆ. (**ಥೇರಗಾಥಾ** ಎಂಬ ಹೆಸರಿನ ಇನ್ನೊಂದು ಗ್ರಂಥ ಕೂಡ ಇನ್ನೂರೈವತ್ತು ಪದ್ಯಗಳನ್ನು ಹೊಂದಿದೆ)

**ಥೇರೀಸ್** ಎಂಬ ಗೌರವಕ್ಕೆ ಪಾತ್ರರಾದ ಮಹಿಳೆಯರು ವಿಭಿನ್ನವಾದ ಸಾಮಾಜಿಕ ಹಿನ್ನೆಲೆಗಳಿಂದ ಬಂದಿರುತ್ತಿದ್ದರೆಂದು ಈ ಸಂಪ್ರದಾಯದಿಂದ ತಿಳಿದು ಬರುತ್ತದೆ:

❖ ಅವರಲ್ಲನೇಕರು ಬ್ರಾಹ್ಮಣರು. ಆಳುವ ಪಂಗಡ/ಗುಂಪು ಕುಟುಂಬಗಳಂಥ ಗಣ್ಯ ಮನೆತನಗಳಿಂದ ಬಂದವರಾಗಿದ್ದರು.

❖ ಕೆಲವರು (ವ್ಯಾಪಾರಸ್ಥರನ್ನೊಳಗೊಂಡಂತೆ) ಶ್ರೀಮಂತ ಕುಟುಂಬಗಳವರಾಗಿದ್ದರು.

❖ ಕೆಲವರು ವೇಶ್ಯೆಯರಾಗಿದ್ದರು.

❖ ಬೆರಳೆಣಿಕೆಯಷ್ಟು ಮಂದಿ ಬಡದಾಸಿಯರಾಗಿದ್ದರು. ಸ್ವಲ್ಪಮಟ್ಟಿಗೆ ಅವರು ರಚಿಸಿದ ಪದ್ಯಗಳು ಒಂದು ಶ್ರೀಮಂತವಾದ ವಿಭಿನ್ನತೆಯನ್ನು ಹೊಂದಿದ್ದವು. ಉದಾಹರಣೆಗೆ, ಪ್ರಸಿದ್ಧಳಾದ ವೇಶ್ಯೆ ಅಂಬಾಪಾಲಿ ರಚಿಸಿದ್ದಳೆನ್ನಲಾದ ಒಂದು ದೀರ್ಘ ಪದ್ಯವು "ಉತ್ಕೃಷ್ಟ" ಕಾವ್ಯದಲ್ಲಿ ಪರಿಚಿತವಾದ ಪ್ರತಿಮೆಯನ್ನು ಹೊಂದಿದೆ. ಉದಾಹರಣೆಗೆ, ಮಹಿಳೆಯರ ಕೂದಲನ್ನು ಕಪ್ಪು ದುಂಬಿಗಳ ಒಂದು ಗುಂಪಿಗೆ ಹೋಲಿಸಲಾಗಿದೆ.

ಮರವೊಂದರ ಕೆಳಗೆ ಧ್ಯಾನಾಸಕ್ತಳಾಗಿರುವ ಭಿಕ್ಷುಣಿಯೊಬ್ಬಳ ಕವಿತೆ ಸ್ವಾರಸ್ಯಕರವಾಗಿದೆ. ಭಿಕ್ಷುಣಿಯು ಒಬ್ಬ ಮಹಿಳೆಯಾಗಿ ಅನ್ನ ಮಾಡುವಂಥ ಸರಳ ಜವಾಬ್ದಾರಿಗಳಿಗೆ ಸೀಮಿತಗೊಳಿಸಿಕೊಳ್ಳಬೇಕು ಎಂಬ ಮೂದಲಿಕೆಯಿಂದ ಅವಳ ಧ್ಯಾನಭಂಗವಾಗುತ್ತದೆ. ಅವಳು ಅದಕ್ಕೆ ಪ್ರತ್ಯುತ್ತರ ನೀಡುತ್ತಾಳೆ:

ಹೆಣ್ಣು ಪ್ರಕೃತಿ ನಮಗೆಂತು ತೊಡಕು ?
ಮನವನೆಟ್ಟು ಗುರಿಯೆಡೆಗೆ

ಕ್ರಮಿಸುವಳರ ಸದಾ ಸುಜ್ಞಾನ ಪಥದೆ.

ಧುತ್ತೆಂದು ನಿಲ್ಲುತ್ತದೆ ಪ್ರಶ್ನೆ :

ನಾನೇನಾಗಿದ್ದೇನೆ,

ಹೆಣ್ಣೆ ? ಗಂಡೆ ?

ಅಥವಾ ಏನಲ್ಲ ?

ಇನ್ನೂ ಕೆಲವು ಕವನಗಳು ನಿಷ್ಠುರ ಸತ್ಯಕ್ಕೆ ಹತ್ತಿರವಾಗಿವೆ. ನಮಗಿಷ್ಟವಾದ ಒಂದು ಕವನದ ಸಾರವನ್ನು ನಿಮ್ಮೊಂದಿಗೆ ಹಂಚಿಕೊಳ್ಳಬಯಸುತ್ತೇವೆ. ಅದು **ಪುನ್ನ** ಎಂಬ ದಾಸಿಯನ್ನು ಕುರಿತಾಗಿದೆ. ಅದು ಪುನ್ನ ಮತ್ತು ಒಬ್ಬ **ಬ್ರಾಹ್ಮಣನ** ನಡುವಿನ ಸಂವಾದದ ರೂಪದಲ್ಲಿದೆ ; ಗಂಗಾ ನದಿಯ ತೀರಗಳ ದೃಶ್ಯ, ಪುನ್ನ ಎಂದಿನಂತೆ ನೀರು ತರಲು ಗಂಗಾನದಿಗೆ ಬರುತ್ತಾಳೆ. **ಬ್ರಾಹ್ಮಣನು** ಚಳಿಯಲ್ಲಿ ನಡುಗುತ್ತಾ ನದಿಯಲ್ಲಿ ಸ್ನಾನ ಮಾಡಿ ಪುಣ್ಯವನ್ನು ಹೊಂದಲು ಬರುತ್ತಾನೆ. ಆ ಆಚರಣೆಯ ಅಸಂಬದ್ಧತೆಯನ್ನು ಪುನ್ನ ಎತ್ತಿತೋರಿಸುತ್ತಾಳೆ. ಅವಳ ವಾದವು ತಿಳಿವಿಗೆ ಕಷ್ಟವಾದ ತತ್ವಕ್ಕಿಂತ ಸಾಮಾನ್ಯ ತಿಳುವಳಿಕೆಯನ್ನಾಧಾರಿಸಿರುತ್ತದೆ. ಒಂದು ವೇಳೆ ನೀರಿಗೆ ಪಾಪವನ್ನು ತೊಳೆಯುವ ಶಕ್ತಿ ನಿಜವಾಗಿಯೂ ಇದ್ದಿದ್ದೇ ಆದರೆ ನೀರಲ್ಲಿರುವ ಮೀನು, ಮೊಸಳೆಗಳೂ ಪುಣ್ಯವನ್ನು ಸಂಪಾದಿಸುತ್ತವೆ. ಅಷ್ಟೇ ಅಲ್ಲ, ನೀರು ಪುಣ್ಯವನ್ನೂ ತೊಳೆದು ಹಾಕುವುದಿಲ್ಲವೆನ್ನಲು ಆಧಾರವೇನು? ಬದಲಿಗೆ **ಬ್ರಾಹ್ಮಣನಿಗೆ ಧರ್ಮವನ್ನು** ಅನುಸರಿಸಲು ಸಲಹೆ ನೀಡುತ್ತಾಳೆ ; ಸಂವಾದದಲ್ಲಿ ಜಯ ಅವಳದಾಗುತ್ತದೆ.

ಎಲ್ಲಾ ದೃಷ್ಟಾಂತಗಳಲ್ಲಾದಂತೆ, ಇಲ್ಲೂ ಕೂಡ ಅಂಥ ಘಟನೆಗಳು "ನಿಜವಾಗಿಯೂ" ಸಂಭವಿಸಿತೇ, ಇಲ್ಲವೇ ಎಂದು ತಿಳಿಯಲು ನಮಗೆ ಸಾಧ್ಯವಾಗುವುದಿಲ್ಲ. ಒಂದು ರೀತಿಯಲ್ಲಿ ವಾಚ್ಯಾರ್ಥದ ವಿಶ್ವಾಸಾರ್ಹತೆಯ ಪ್ರಶ್ನೆ ಇಲ್ಲಿ ಅಪ್ರಸ್ತುತ. ಈ ಕಥೆಗಳು ಸಾಧ್ಯತೆಗಳ ಕಲ್ಪನೆಯನ್ನು ಹೊಂದಿವೆ. ಅವು ದಾಸಿ ಮತ್ತವಳ ಒಪ್ಪಿತ ಪ್ರಾಪಂಚಿಕ ಜ್ಞಾನ ಅಥವಾ ಗೃಹಜೀವನದಾಚೆಯ ಬದುಕನ್ನು ಹಕ್ಕೆಂದು ಭಾವಿಸುವ ಭಿಕ್ಷುಣಿಯನ್ನು ಕೇಂದ್ರವನ್ನಾಗಿ ಮಾಡಿಕೊಂಡಿರುವುದು ಮಹತ್ವಪೂರ್ಣವಾಗಿದೆ. ಇದು ವೈದಿಕ ಸಂಪ್ರದಾಯದ ಅಧಿಕಾರವನ್ನು ಪಡೆದು ಪೂರ್ವಗ್ರಹದ ಕಲಿಕೆಯಿಂದ ದೂರ ಸರಿದು, ಕಡಿಮೆ ಸಂರಚನೆಯ ಕಲಿಕಾ ಕ್ಷೇತ್ರಗಳ ಒಂದು ಅರಿವನ್ನು ಕುರಿತು ಚರ್ಚಿಸಲು ಸಾಧ್ಯವಾಗಿಸಬಹುದು :

- ❖ ರೂಢಿಗತ ಸಾಮಾಜಿಕ ಸಂಪರ್ಕಗಳ ಮೂಲಕ
- ❖ ಬಾಂಧವ್ಯದ ಜಾಲಗಳ ಮೂಲಕ
- ❖ ಪರ್ಯಾಯವಾದ, ಅಸಂಪ್ರದಾಯಿಕವಾದ ಸಂಪರ್ಕ ವಿಧಾನಗಳ ಸಾಲಿನ ಮೂಲಕ.

**ಥೇರಿಗಾಥಾ ಎಷ್ಟೋ ಗ್ರಂಥಗಳಂತೆಯೇ ಒಂದು ಸಂಕೀರ್ಣವಾದ ಸಂರಕ್ಷಣೆ ಮತ್ತು ಸಂವಹನಗಳ ಪ್ರಕ್ರಿಯೆಯ ಫಲವಾಗಿ ನಮಗೆ ಲಭಿಸಿದೆ. ಆ ಪ್ರಕ್ರಿಯೆಯಲ್ಲಿ ಇತರ ಗ್ರಂಥಗಳಲ್ಲಾದಂತೆಯೇ ಸಾಕಷ್ಟು ಮಾರ್ಪಾಡುಗಳಾಗಿರಬಹುದು. ಕ್ರಿಸ್ತಶಕ ಆರನೇ ಶತಮಾನದಲ್ಲಿ ಅದು ತನ್ನ ಅಂತಿಮ ರೂಪವನ್ನು ಪಡೆದುಕೊಂಡಿತು. ಗ್ರಂಥದ ಕೆಲವು ಭಾಗಗಳು ಬೌದ್ಧ ನಿಯಮಗಳನ್ನು ಸಂಗ್ರಹಿಸಿದ ಕಾಲಕ್ಕೆ (ಕ್ರಿಸ್ತಪೂರ್ವ 3 - 4ನೇ ಶತಮಾನಗಳು) ಸೇರಿರಬಹುದು. ಈ ಎಲ್ಲ ಸಮಸ್ಯೆಗಳು ಈ ಗ್ರಂಥಕ್ಕೆ ವಿಶಿಷ್ಟವಾದುದೇನಲ್ಲವಾದರೂ ಮಹಿಳೆಯರ ಆತ್ಮಾಭಿವ್ಯಕ್ತಿಯ ಸ್ವೀಕೃತಿಯಾಗಿ ಮಹತ್ವದ್ದಾಗಿ ಉಳಿಯುತ್ತದೆ.**

❖ ಅಂಥ ಕಲಿಕಾ ವಿಧಾನಗಳು ಸಂರಕ್ಷಿತ ಗ್ರಾಂಥಿಕ ಸಂಪ್ರದಾಯಗಳಲ್ಲಿ ಸುಲಭವಾಗಿ ದೃಷ್ಟಿ-ಗೋಚರವಲ್ಲದಿರಬಹುದು. ಆದರೂ ಈ ಪರ್ಯಾಯಗಳು ಪುರಾತನ ಭಾರತದ ಅಗಾಧ ಪ್ರಮಾಣದ ಮಹಿಳೆಯರ (ಮತ್ತು ಪುರುಷರ) ಗ್ರಹಿಕೆ ಮತ್ತು ದೃಷ್ಟಿಗಳನ್ನು ರೂಪಿಸಿರಬಹುದಾದ ಸಾಧ್ಯತೆಯನ್ನು ಒಪ್ಪಿಕೊಳ್ಳಬೇಕಾಗುತ್ತದೆ.

**ನಾವು ಹೀಗೆ ನಿರ್ಣಯಿಸಬಹುದೆ ?**

❖ ಮಹಿಳೆಯರಿಗೆ ಸಂಬಂಧಿಸಿದಂತೆ ಏಕರೂಪದ ವೈಭವದ ಗತಕಾಲವಿಲ್ಲ : **ಋಗ್ವೇದವು** ಮಹಿಳಾ ದಾರ್ಶನಿಕರ ಬಗ್ಗೆ ಹೇಳುತ್ತಲೇ ಮಹಿಳೆಯರನ್ನು ಆಸ್ತಿಯ ಒಂದು ವಿಧ ಎಂದೂ ಹೇಳುತ್ತದೆ.

❖ ಒಂದು ವೇಳೆ ವೈಭವದ ಕಾಲ ವೊದಲಿಗೇ ಇರಲಿಲ್ಲವೆಂದಮೇಲೆ ಅನಂತರದಲ್ಲಿ ಏಕ ರೂಪದ ಅವನತಿ ಇರಲಿಲ್ಲ ಎಂದಾಗುತ್ತದೆ.

❖ ಮನೆಯ ಒಳಗೆ ಮತ್ತು ಹೊರಗಿನ ದೈನಂದಿನ ಬದುಕಿನ ಸಂದರ್ಭಗಳಲ್ಲಿ ಹಿಂಸೆಯು ಮಹಿಳೆಯರ ಬದುಕಿನ ಭಾಗವೇ ಆಗಿತ್ತು.

❖ ವಿದೇಶೀ ಆಕ್ರಮಣಕಾರರಿಗೆ ಸಂಬಂಧಿಸಿದ ಹಿಂಸೆಯನ್ನು ಕುರಿತಂತೆ ವಿಶಿಷ್ಟವಾದುದೇನೂ ಇರಲಿಲ್ಲ; ರಾಜರು ಮತ್ತು ಉಪಪ್ರಾಂತ್ಯಗಳ ಮುಖಂಡರು ಒಬ್ಬರಿನ್ನೊಬ್ಬರ ಪ್ರದೇಶಗಳಲ್ಲಿ ವಿಧ್ವಂಸಕ ಕೃತ್ಯಗಳನ್ನು ನಡೆಸಿರಬಹುದು. ವಾಸ್ತವದಲ್ಲಿ ಈ "ಸಾಧನೆಗಳನ್ನು" ಶಾಸನಗಳಲ್ಲಿ (ದಾಖಲಿಸಿ) ಸಂಭ್ರಮಿಸಿರಬಹುದು.

❖ ಕೆಲವು ಮಹಿಳೆಯರಿಗೆ ಆಸ್ತಿ ಅಧಿಕಾರವಿತ್ತು. ಉಳಿದಂತೆ ಮಹಿಳೆಯರೆಲ್ಲರೂ ಉತ್ಪಾದನೆ ಮತ್ತು ಸಂತಾನೋತ್ಪಾದನೆಯಲ್ಲಿ ಭಾಗವಹಿಸಿದ್ದಿರಬಹುದು. ಅದರ ಅರ್ಥವೇನಿರಬಹುದೆಂದು ನಿರ್ದಿಷ್ಟ ಸಂದರ್ಭಗಳಲ್ಲಿ ತಿಳಿಯಬೇಕಾದುದು ಅಗತ್ಯ.

❖ ವೈದಿಕ ಸಾಹಿತ್ಯದಲ್ಲಿ ಮಹಿಳೆಯರ ಆತ್ಮಾಭಿವ್ಯಕ್ತಿಯ ಕೆಲವು ಗುರುತುಗಳಿವೆ. ಬೌದ್ಧ ಸಂಪ್ರದಾಯದಲ್ಲಿ ಮತ್ತಷ್ಟು ದೊರಕಿವೆ. ಅವು ಮಹಿಳೆಯರ ಬದುಕಿನ ಶ್ರೀಮಂತ ವೈವಿಧ್ಯತೆಯ ಒಂದು ಅಂದಾಜನ್ನು ನೀಡುತ್ತವೆ.

❖ ಅಂತಿಮವಾಗಿ, ಗತಕಾಲದ ಪುನರುತ್ಥಾನದ ಪ್ರಶ್ನೆಯೇ ಏಳುವುದಿಲ್ಲ. ಯಾರ ಗತಕಾಲವನ್ನು ಪುನರುತ್ಥಾನಗೊಳಿಸ ಬೇಕು ? ಅಪಲಾ ಮತ್ತು ಘೋಷರದೇ ಅಥವಾ ಉಡುಗೊರೆಯಾಗಿ ದೂರವಾಗುವ **ವಧು**ವಿನದೇ ? ಪುರಾತನ ಕಾಲದ ಅಧ್ಯಯನವು ವರ್ತಮಾನದ ಅರಿವನ್ನು ಹಿಗ್ಗಿಸಲು ನೆರವಾಗುತ್ತದೆ. ನಮ್ಮ ವೈವಿಧ್ಯತೆಯ ಶ್ರೀಮಂತ ಪರಂಪರೆಯನ್ನು ನಾವು ಒಪ್ಪಿಕೊಳ್ಳುವ ಅಗತ್ಯವಿದೆ. ಅಲ್ಲದೆ, ಗೃಹಲಕ್ಷ್ಮಿ ಮತ್ತು ಧರ್ಮ ಪತ್ನಿಯರ ಪ್ರಸ್ತುತವಲ್ಲದ ಮತ್ತು ನಿರ್ಬಂಧಿತ ಮಾದರಿಗಳಿಗೆ ಪುನಶ್ಚೇತನ ನೀಡುವ ಪ್ರಯತ್ನದಲ್ಲಿ ಪೆಡಸುತನ ಇರದಂತೆ ನೋಡಿಕೊಳ್ಳ ಬೇಕಾಗಿದೆ.

ಇಂಗ್ಲೀಷ್ ಮೂಲ: **'ವುಮೆನ್' ಇನ್ ಅರ್ಲಿ ಇಂಡಿಯಾ :**
ಡಾ॥ ಸ್ವಾತಿಜೋಷಿ

ಡಾ॥ ಜಾವೇದ್ ಮಲ್ಲಿಕ್

ಕನ್ನಡಕ್ಕೆ : ಡಾ॥ ವೆಂ.ವನಜ

## ನಿನಗರ್ಥವಾಗುವುದಿಲ್ಲ!

ಜಗಕೆಲ್ಲಾ ಯಾಕಿಂಥಾ
ನಿಶೆ ಕುಡಿಸಿ
ನಶೆ ಏರಿಸುವೆಯೋ ಸೂರ್ಯ ?
ನಿನಗೆಲ್ಲವೂ ಹುಡುಗಾಟ
ಕುಡಿಸಿ, ಮನವ ಕೆಡಿಸುವ ಆಟ.
ಉನ್ಮತ್ತ ಪ್ರೀತಿಯಮಲು
ನಿಷ್ಕಾರಣ ನಿರಾಕರಣದ ತೆವಲು
ಸುಮ್ಮನೆ ಕಲ್ಲಾದವಳು
ಭೂಮಿಯಾಳಕೆ ಇಳಿದು ಹೋದಳು
ಇರುವುದಲ್ಲವ ಬಿಟ್ಟು
ಇಲ್ಲದ್ದ ತಡಕಿ
ಎಲ್ಲವಾಗುತ್ತಲೇ ಇಲ್ಲವಾದವಳು
ಮತ್ತೆ ಮತ್ತೆ ತೆತ್ತುಕೊಂಡೂ
ಅಪರಿಪೂರ್ಣಳಾಗಿಯೇ
ಉಳಿದವಳು !

ಸೂರ್ಯ
ಇತಿಹಾಸದುದ್ದಕ್ಕೂ ನಿನ್ನ
ಅವಿವೇಕದ ಎಷ್ಟೊಂದು
ಉದಾಹರಣೆಗಳು ?
ಅರ್ಥವಾಗದವಳೇ ಇವಳು ?

ಯಾರಿಗೂ ಎಂದಿಗೂ
ಅರ್ಥವಾಗದ
ಕವಿತೆ ಬರೆಯುತ್ತಾಳೆ
ಯಾಕೆ ಕೈಲಾಗದ ಹುಡುಗಿ ?
ಇದೂ ಕೂಡ ನಿನ್ನ
ಕರುಣೆಯೇನೋ ?
ನಿನ್ನಂಥ ಪ್ರಖರ ಬೆಳಕಿನವನಿಗೆ
ಕತ್ತಲೊಡಲ ಅರಳುವಿಕೆಗಳು
ಬಿಡು, ಅರ್ಥವಾಗುವುದಿಲ್ಲ !

- **ರೂಪಾ.** ಹಾಸನ

# ಬಂಗಾರದ ಪಂಜರದಲ್ಲಿ ಒಂಟಿಯಾಗಿ ಬದುಕಲು ಆಗಲಿಲ್ಲ...

**ಮಾನಸ ಬಳಗದವರು ಇತ್ತೀಚೆಗೆ ಸಂಸತ್ತಿನಲ್ಲಿ ಮಂಡಿಸಲಾಗುತ್ತಿರುವ ಕೌಟುಂಬಿಕ ಹಿಂಸೆಯ ಬಿಲ್ ಬಗ್ಗೆ ಚರ್ಚೆ ಹಮ್ಮಿಕೊಂಡಿದ್ದೆವು. ಇದೇ ಸಂದರ್ಭದಲ್ಲಿ ನಮಗೆ ಈ ಪತ್ರ ಸಿಕ್ಕಿತು. ಬಂಧು ಬಾಂಧವರು, ಸ್ನೇಹಿತರು, ಆತ್ಮೀಯರ ನೆರವು ಬೆಂಬಲಗಳಿಲ್ಲದೆ ಅನಿವಾಸಿ ಭಾರತೀಯ ಹೆಣ್ಣೊಬ್ಬಳು ಅಮೆರಿಕಾದಂತ ದೇಶದಲ್ಲಿ ಅನುಭವಿಸಿದ ಕೌಟುಂಬಿಕ ಹಿಂಸೆಯ ಬವಣೆಯನ್ನು ಪತ್ರದ ಮೂಲಕ ತನ್ನ ತಂದೆ - ತಾಯಿಯರಿಗೆ ತಿಳಿಸಿದ್ದಾಳೆ. ಆ ಪತ್ರವನ್ನು 'ಮಾನಸ' ಓದುಗರಿಗಾಗಿ ಪ್ರಕಟಿಸುತ್ತಿದ್ದೇವೆ.**

ಪ್ರೀತಿಯ ಅಪ್ಪ, ಅಮ್ಮ

ನೀವು ಚನ್ನಾಗಿರುವಿರೆಂದು ನಂಬಿದ್ದೇನೆ.

ನಾನು ಚಿಕಾಗೋಗೆ ಹೋದಾಗಿನಿಂದ ನಿರಂತರವಾಗಿ ನಿಮಗೆ ಪತ್ರ ಬರೆಯುತ್ತಲೇ ಇದ್ದೇನೆ. ಆದರೆ ಕೆಲವು ವಿಷಯಗಳನ್ನ ನಿಮಗೆ ಹೇಳೇ ಇಲ್ಲ. ಸಾವಿರಾರು ಮೈಲಿ ದೂರದಲ್ಲಿರುವ ನಾನು ಈ ವಿಷಯ ಹೇಳಿದ್ದರೂ ನೀವೇನೂ ಸಹಾಯ ಮಾಡಲಿಕ್ಕೆ ಆಗುತ್ತಿರಲಿಲ್ಲ. ನಂತರ ಅದೇ ನಿಮಗೇ ಕೊರಗಾಗುತ್ತಿತ್ತು. ಆದರೆ ಈಗ ಹಲವಾರು ಸಮಸ್ಯೆಗಳು ನನ್ನ ಬೆನ್ನಿಗಿವೆ. ಹಾಗಾಗಿ ಕಳೆದ ಒಂದು ಒಂದುವರೆ ವರ್ಷದಲ್ಲಿ ನಡೆದ ಎಲ್ಲಾ ಘಟನೆಗಳನ್ನು ವಿವರವಾಗಿ ಹೇಳಲೇ ಬೇಕಿದೆ.

ಚಿಕಾಗೋದಲ್ಲಿನ ನನ್ನ ಮೊದಲ ಕೆಲವು ತಿಂಗಳು ತುಂಬಾ ಚೆನ್ನಾಗಿತ್ತು. ಇದರ ಬಗ್ಗೆ ನನ್ನ ಪತ್ರಗಳು ಈ ಖುಷಿ ಮತ್ತು ಉತ್ಸುಕತೆಯನ್ನೆ ತಿಳಿಸಿರುತ್ತೆ. ರಮೇಶನಿಗೂ ಒಳ್ಳೆ ಕೆಲಸ, ಚೆಂದದ ದೊಡ್ಡ ಮನೆ, ಎಲ್ಲೆಲ್ಲಿ ಹೋದೆವೋ ಲಕ್ಸುರಿ ಕಾರಿನಲ್ಲೇ ಸುತ್ತಿದೆವು. ಈ ಸಂದರ್ಭದಲ್ಲಿ ರಮೇಶ್ ಚಿಕಾಗೋದ ತೆಲುಗು ಸಂಘದ ಕಾರ್ಯದರ್ಶಿ ಆಗಿದ್ದ. ನಮಗೂ ತುಂಬಾ ಜನ ಸ್ನೇಹಿತರಿದ್ದರು. ಪಾರ್ಟಿ, ಪಿಕ್‌ನಿಕ್‌ಗಳಿಗಂತೂ ಕೊನೆನೇ ಇರಲಿಲ್ಲ. ನೆಲ್ಲೂರಿನಲ್ಲಿದ್ದಾಗ ಕುಚಿಪುಡಿ ಡಾನ್ಸ್ ನೋಡಲಿಕ್ಕಾಗಲೀ, ಕರ್ನಾಟಕ್ ಸಂಗೀತ ಸಮ್ಮೇಳನದಲ್ಲಿ ಹೋಗಲು ಅವಕಾಶವೇ ಸಿಕ್ಕಿರಲಿಲ್ಲ. ಆದರೆ ಇಲ್ಲಿ ವಾರಾಂತ್ಯದಲ್ಲಿ ಇವೆಲ್ಲಾ ಇತ್ತು. ಎಂತಹ ಅದ್ಭುತವಾದ ಸಮಯ!.

ಇವೆಲ್ಲದಕ್ಕೆ ಹೊಂದಿಕೊಳ್ಳಲಿಕ್ಕೆ ಹೆಚ್ಚು ಸಮಯವೇನು ಹಿಡಿಸಲಿಲ್ಲ. ಅನಂತರದಲ್ಲಿ ಒಂಟಿತನ ಭಾವ ಕಾಡಲು ಶುರುವಾಯಿತು. ಅಕ್ಕಪಕ್ಕದಲ್ಲಿ ಯಾರೂ ತೆಲಗು ಮಾತನಾಡುವವರು ಇಲ್ಲ. ಯಾರ ಜೊತೆನೂ ಮಾತನಾಡಬಾರದೆಂದೇನೂ ಇಲ್ಲ, ಆದರೆ ದಿನದಲ್ಲಿ ಯಾರು ಮಾತನಾಡಲು ಸಿಕ್ಕುತ್ತಿರಲಿಲ್ಲ. ಮನೆ ಜೈಲಿನ ತರ ಅನ್ನಿಸತೊಡಗಿತು. ರಮೇಶ್ ಸಂಜೆ ಮೇಲೆ ಮನೆಗೆ ಬರುತ್ತಿದ್ದ. ತುಂಬಾ ಸುಸ್ತಾಗಿರುತ್ತಿದ್ದುದರಿಂದ ಅವನಿಗೆ ಮಾತನಾಡಲು ಮೂಡ್ ಇರುತ್ತಿರಲಿಲ್ಲ. ಫ್ರೆಂಡ್ಸ್ ಎಲ್ಲರೂ ಮೈಲಿಗಳ ದೂರ ಇದ್ದರು. ನನಗೆ ಕಾರು ಓಡಿಸಲು ಬರುತ್ತಿರಲಿಲ್ಲ. ರಮೇಶ್‌ಗೆ ನನ್ನನ್ನು ಸಾರ್ವಜನಿಕ ಬಸ್‌ನಲ್ಲಿ ಕರಕೊಂಡು ಹೋಗುವುದಕ್ಕೆ ಇಷ್ಟ ಪಡುತ್ತಿರಲಿಲ್ಲ. ಅವನಿಗೆ ರೈಲಿನಲ್ಲಿ ಹೋಗುವುದು ಸೇಫ್ ಅಲ್ಲ ಎನ್ನುವ ಭಾವನೆ.

ವಾರದಲ್ಲೆಲ್ಲ ಮನೆಯಿಂದ ಹೊರಗಿರಲು ಒಂದು ಸಣ್ಣ ಉದ್ಯೋಗ ಪಡೆಯಬೇಕು ಎಂದು ಅನಂತರದಲ್ಲಿ ಅನ್ನಿಸತೊಡಗಿತು. ರಮೇಶ್‌ಗೆ ಈ ಬಗ್ಗೆ ಕೇಳಿದಾಗ ನಿನಗ್ಯಾರು ಕೆಲಸ ಕೊಡುತ್ತಾರೆ? ಅದು ಬರಿ ತೆಲುಗಿನಲ್ಲಿ ಎಂ.ಎ ಮಾಡಿರೋ ನಿನಗೆ? ನಿಜ ತೆಲಗು ಇಲ್ಲಿ ಯಾರಿಗೆ ಬೇಕು ? ನನ್ನ ಇಂಗ್ಲೀಷ್ ಬೇರೆ ಚೆನ್ನಾಗಿಲ್ಲ. ನಿನಗೆ ಯಾಕೆ ಕೆಲಸ ಬೇಕು ? ನನ್ನ ಕೆಲಸ ಸಾಲದೇ ? ಅಂತ ರಮೇಶ್ ಕೇಳಿದ. ಹೌದು ಅವನು ಒಳ್ಳೆ ಕೆಲಸದಲ್ಲಿದ್ದ. ನಿಜವಾಗಲೂ ಒಳ್ಳೆ ಕೆಲಸವೇ. ನಿಜ ಹೇಳಬೇಕೆಂದರೆ ನನಗೂ ಕೆಲಸ ಮಾಡಲು ಇಷ್ಟ ಇಲ್ಲ. ಆದರೆ ಈ ಮನೆಯ ಬಂಧನದಿಂದ ಮೊದಲು ಹೊರ ಬರಬೇಕಾಗಿತ್ತು.

ಕೆಲಸ ಸಿಗದಿದ್ದರೆ ಹೋಗಲಿ, ಬೇರೆ ಏನಾದರೂ ಓದಬೇಕೆಂದುಕೊಂಡೆ. ಸುಮಾರು ಕಡೆ ಫೋನ್ ಮಾಡಿದಾಗ ಗೊತ್ತಾಗಿದ್ದು, ಇಲ್ಲಿನ ಕಾಲೇಜುಗಳಲ್ಲಿ ಓದಲು ಯಾವುದೇ ವಯಸ್ಸಿನ ನಿರ್ಬಂಧಗಳಿಲ್ಲವೆಂದು. ಆದರೆ ಫೀಜ್ ಮಾತ್ರ ಎಲ್ಲಾ ಕಾಲೇಜುಗಳಲ್ಲಿ ಹೆಚ್ಚಾಗಿದೆ. ಕೆಲವು ಕಾಲೇಜುಗಳಲ್ಲಿ ನಮ್ಮಂತಹವರೂ ಓದಬಹುದು. ನಮ್ಮ ಮನೆಗೆ ಅರ್ಧ ಮೈಲಿ ದೂರದಲ್ಲೇ ಅಂತಹ ಒಂದು ಕಾಲೇಜಿತ್ತು. ಮನೆಯಿಂದ ಹೊರಗಿರಲು ಅಲ್ಲಿ ಯಾವುದಾದರೂ ಕೋರ್ಸ್ ಮಾಡೋಣವೆಂದುಕೊಂಡೆ. ಯಾವುದಾದರೂ ಕೆಲಸ ಪಡೆದುಕೊಳ್ಳಲು ನಾನು ಕಾಲೇಜಿಗೆ ಸೇರುತ್ತಿರುವುದೆಂದು ರಮೇಶ್ ಅಂದುಕೊಂಡ "ಕೆಲಸದಲ್ಲಿರುವ ಹುಡುಗಿಯನ್ನೇ ಮದುವೆಯಾಗಬೇಕೆಂದಿದ್ದರೆ ಯಾರಾದರೂ ಡಾಕ್ಟರ್‌ನ್ನೋ ಅಥವಾ ಕಂಪ್ಯೂಟರ್ ಸೈನ್ಸ್ ಗ್ರಾಜುಯೇಟ್‌ನ್ನೋ ಆಗುತ್ತಿದ್ದೆ.

ತೆಲುಗಿನಲ್ಲಿ ಎಂ.ಎ ಮಾಡಿರುವ ನಿನ್ನನ್ನು ಯಾಕೆ ಮದುವೆಯಾಗುತ್ತಿದ್ದೆ ಎಂದು ಅವನು ಕೇಳಿದ. ನನ್ನ ದುರಾದೃಷ್ಟ ಕೇವಲ ಎರಡು ವಾರ ಮಾತ್ರ ರಜೆ ಇತ್ತು. ಹೆಚ್ಚು ಸಮಯ ಇದ್ದು, ಭಾರತಕ್ಕೆ ಬಂದಿದ್ದರೆ ನಿಜವಾಗಲೂ ಇನ್ನೂ ಒಳ್ಳೆಯ ಸಂಗಾತಿಯನ್ನೆ ಹುಡುಕಿಕೊಳ್ಳುತ್ತಿದ್ದೆ" ಎಂದ.

ಮಹಿಳೆಗೇ ತನ್ನದೇ ಆದ ಆತ್ಮ ಗೌರವ ಇರಬೇಕುಹಾಗೂ ತಮ್ಮ ಕಾಲಿನ ಮೇಲೆ ನಿಲ್ಲಬೇಕೆಂದು ನೀವೇ ಹೇಳಿಕೊಟ್ಟಿದ್ದು. ಆದರೆ ಹೇಗೆ ? ಆಂಧ್ರದಲ್ಲಿ ಯಾದರೆ ಮಾಸ್ಟರ್ ಡಿಗ್ರಿಗೆ ಬೆಲೆ ಇತ್ತು. ಇಲ್ಲಿ ಇದನ್ನ ಯಾರ್ ಕೇರ್ ಮಾಡುತ್ತಾರೆ. ನೀವುನೂ ರಮೇಶ್‌ನ ಬಗ್ಗೆ ಥ್ರಿಲ್ ಆದಿರಿ, ಯಾಕೆಂದರೆ ಅವನು ಅಮೇರಿಕಾದಲ್ಲಿ ಸೆಟಲ್ ಆಗಿದ್ದಾನೆ. ಒಳ್ಳೆ ಕೆಲಸ ಇದೆ ಜೊತೆಗೆ ವರದಕ್ಷಿಣೆ ಬೇರೆ ಕೇಳಲಿಲ್ಲ ಅಂತ. ಆದರೆ ನನ್ನ ಓದು ಇಲ್ಲಿ ಯಾವ ಪ್ರಯೋಜನಕ್ಕೂ ಬರಲಿಲ್ಲ. ಒಂದೊಂದು ಸಂದರ್ಭದಲ್ಲಿ ನಿಮ್ಮ ಮೇಲೆ ಸಿಟ್ಟು ಸಹ ಮಾಡಿಕೊಂಡಿದ್ದೇನೆ. ನಿಮ್ಮ ವ್ಯಾಲ್ಯೂಸ್‌ಗೋಸ್ಕರ ನಾನು ಬೆಲೆ ತೆತ್ತ ಬೇಕಾಯಿತು ಅಂತ ಅನ್ನಿಸ್ತು.

ತುಂಬಾ ವಾದಗಳಾದ ನಂತರ, ಕೊನೆಗೂ ರಮೇಶ್ ಮರುಕಪಟ್ಟು ನನ್ನನ್ನು ಕಮ್ಯುನಿಟಿ ಕಾಲೇಜಿಗೆ ಸೇರಲು ಒಪ್ಪಿಗೆಕೊಟ್ಟ. ವರ್ಡ್‌ಪ್ರೊಸೆಸಿಂಗ್‌ನಿಂದ ನನ್ನ ಕೋರ್ಸ್ ಶುರುವಾಯಿತು. ತರಗತಿಗಳು ಶುರುವಾದ ಸ್ವಲ್ಪ ದಿನಗಳಲ್ಲೇ ಕಾಲೇಜಿನ ನೋಟೀಸ್ ಬೋರ್ಡಿನ ಮೇಲೆ ಕೆಲಸ ಖಾಲಿ ಇರುವ ಬಗ್ಗೆ ಹಾಕಿದ್ದರು. ಅದು ಪ್ರಾರಂಭಿಕ ಹಂತದ ಕೆಲಸ. ಲೈಬ್ರರಿಯಲ್ಲಿ ವಿದ್ಯಾರ್ಥಿಗಳು ಟೇಬಲ್ ಮೇಲೆ ಬಿಟ್ಟುಹೋದ ಪುಸ್ತಕಗಳನ್ನು ತಗೆದು ಮತ್ತೆ ಅಲಮಾರುಗಳಲ್ಲಿ ಅವುಗಳ ಸ್ಥಳದಲ್ಲೆ ಇಡುವ ಲೈಬ್ರರಿ ಸಹಾಯಕರ ಕೆಲಸ. ಈ ಕೆಲಸ ಮಾಡುವವರಿಗೆ ಅದೇ ಕಾಲೇಜಿನಲ್ಲಿ ಉಚಿತವಾಗಿ ಶಿಕ್ಷಣ ಮಾಡಲಾಗುವುದೆಂದು ಹೇಳಿದ್ದರು. ನಾನು ರಮೇಶ್‌ಗೆ ಹೇಳದೆ ಈ ಕೆಲಸಕ್ಕೆ ಅರ್ಜಿ ಹಾಕಿದೆ. ಆತನಿಗೆ ಹೇಳಿದರೂ ಅರ್ಜಿ ಹಾಕಲಿಕ್ಕೆ ಅವಕಾಶ ಕೊಡುವುದಿಲ್ಲವೆಂದು ನನಗೆ ಗೊತ್ತಿತ್ತು.

ನನಗೆ ಈಗಾಗಲೇ ಲೈಬ್ರರಿ ಹಾಗೂ ಕಾಲೇಜಿನ ಬಗ್ಗೆ ತಿಳುವಳಿಕೆ ಇದ್ದುದರಿಂದ ಕೆಲಸ ಕೊಡಲು ಮುಂದಾದರು. ಕೆಲಸ ಸಿಗುವುದು ಗ್ಯಾರಂಟಿ ಆದ ದಿನ ವಿಷಯ ರಮೇಶ್‌ಗೆ ಹೇಳಿದೆ. ಮೊದಲೇ ನಿರೀಕ್ಷಿಸಿದಂತೆ ಅವನು ತುಂಬಾ ಅಪ್‌ಸೆಟ್ ಆದ. ಮನೆಯಲ್ಲಿ ಬೇಜಾರು, ಒಂಟಿತನ ಕಾಡುತ್ತೆ ಅಂತ ಹೇಳಿದ್ದಕ್ಕೆ ನಿನ್ನ ಕಾಲೇಜಿಗೆ ಸೇರಿಸಿದ್ದು. ಯಾರು ಈ ಕೆಲಸಕ್ಕೆ ಅರ್ಜಿ ಹಾಕಲು ಹೇಳಿದ್ದು ? ಈ ಕೆಲಸದ ಅಗತ್ಯವಾದರೂ ನಿನಗೆ ಏನಿತ್ತು ? ಇದು ಅವನ ಪ್ರತಿಕ್ರಿಯೆಯಾಗಿತ್ತು. ಅವನು ಈ ಕೆಲಸವನ್ನು ಅಷ್ಟು ಕೀಳಾಗಿ ನೋಡಲು ಕಾರಣ ಕೇವಲ ಐದು ಸಾವಿರ ಡಾಲರ್ ಸಂಬಳ ನೀಡುತ್ತದೆಂದು. ಏಕೆಂದರೆ ಅದು ಅವನ ಸಂಬಳದ 1/6 ಭಾಗ. ಆದರೂ ನನಗನ್ನಿಸಿದ್ದು ಯಾವುದೇ ಕಾರಣಕ್ಕೂ ಈ ಕೆಲಸ ಬಿಡಬಾರದೆಂದು. ಅವನಿಗೂ ಏನು ಮಾಡಬೇಕೆಂದು ತೋಚಲಿಲ್ಲ. ತುಂಬಾ ವಾದಗಳಾದ ನಂತರ ಸ್ವಲ್ಪ ಮೆದುವಾದ.

ಆ ನಂತರ ಅನಿರೀಕ್ಷಿತವಾಗಿ ಒಂದು ಬೆಳವಣಿಗೆಯಾಯಿತು. ರಮೇಶ್ ಕೆಲಸ ಮಾಡುತ್ತಿದ್ದ ಕಂಪನಿಯನ್ನ ಬೇರೆ ಯಾವುದೋ ಕಂಪನಿಯವರು ವಹಿಸಿಕೊಂಡರು. ಇದರಿಂದ ತುಂಬಾ ಜನ ಕೆಲಸ ಕಳಕೊಂಡರು. ಅದೇ ಕಂಪನಿಯಲ್ಲಿ ಉಳಿದು-ಕೊಂಡವರಲ್ಲಿ ರಮೇಶ್‌ನೂ ಒಬ್ಬ. ಆದರೆ ಹೊಸ ಕಂಪನಿಯವರು ಅವನನ್ನು ಕೇಂದ್ರ ಸ್ಥಳವಾದ ಕ್ಲೀವ್ ಲ್ಯಾಂಡ್‌ಗೆ ನೇಮಿಸಿದರು. ಬೇರೆ ಆಯ್ಕೆ ಇಲ್ಲದ ಕಾರಣ ರಮೇಶ್ ಅಲ್ಲಿಗೆ ಹೋಗಲು ಒಪ್ಪಿಕೊಂಡ. ನನಗೆ ಏನು ಮಾಡಬೇಕೆಂದು ತೋಚಲಿಲ್ಲ. ನಾನು ಓದಿಕೊಂಡಿರುವ ಓದು, ಇನ್ನೊಂದು ಹೊಸ ಕೆಲಸವನ್ನು ಹುಡುಕಲು ಆಗುವುದಿಲ್ಲ. ನನಗೆ ಭಯವಾಯಿತು. ಈ ಕೆಲಸವನ್ನು ಬಿಟ್ಟು ಮತ್ತೆ ಕ್ಲೀವ್ ಲ್ಯಾಂಡ್‌ನಲ್ಲಿ ಮತ್ತೊಂದು ಕೆಲಸವನ್ನು ನಿರೀಕ್ಷಿಸುವುದು ಕಷ್ಟ. ರಮೇಶ್ ಬೇರೆ ಸಿಟ್ಟಿನಲ್ಲಿದ್ದ. ಅವನ ಜೊತೆ ಮಾತನಾಡಲು ಸಂಕೋಚವಾಗುತ್ತಿತ್ತು. ನಿನ್ನ ಜೀವನವೇ ನಿನಗೆ ಎಲ್ಲಾ ಆದರೆ ಭಾರತದಲ್ಲೇ ಇರಬೇಕಾಗಿತ್ತು. ಇಲ್ಲಿಗೆ ನನ್ನ ಜೊತೆ ಯಾಕೆ ಬರಬೇಕಿತ್ತು. ನನ್ನ ಜೊತೆ ಕ್ಲೀವ್ ಲ್ಯಾಂಡ್‌ಗೆ ಬರುತ್ತೀಯ ಅಥವಾ ಡೈವೋರ್ಸ್ ತೆಗೆದುಕೊಳ್ಳುತ್ತೀಯ ಅಂತ ಮೊದಲು ತೀರ್ಮಾನ ತೆಗೆದುಕೋ ಎಂದು ರಮೇಶ್ ಬೆದರಿಕೆ ಹಾಕಿದ.

ಕೆಲಸ ಸಿಕ್ಕಿ ಕೇವಲ ಎರಡು ತಿಂಗಳಾಗಿತ್ತು. ಎರಡನೇ ಕಂಪ್ಯೂಟರ್ ಕೋರ್ಸ್ ಮಾಡುತ್ತಿದ್ದೆ. ಎಜುಕೇಷನ್ ಬೇರೆ ಫ್ರೀ. ನನ್ನ ಬಳಿ ಕಾರು ಇಲ್ಲದಿದ್ದ ಕಾರಣ ಅರ್ಧ ಮೈಲಿ ದೂರವಿದ್ದ ಕಾಲೇಜಿಗೆ ನಡೆದೇ ಹೋಗಿ ಬರುತ್ತಿದ್ದೆ. ನನ್ನ ಅಸ್ತಿತ್ವ ಉಳಿಸಿಕೊಳ್ಳಲು ಇದ್ದ ಈ ಕೆಲಸವನ್ನು ಬಿಡಲು ನಾನು ತಯಾರಿರಲಿಲ್ಲ. ತುಂಬಾ ಯೋಚಿಸಿದ ನಂತರ, ಒಂದು ವರ್ಷದ ಮಟ್ಟಿಗೆ ನಾವು ಚಿಕಾಗೋದಲ್ಲೇ ಇರೋಣ ನಂತರ ಕ್ಲೀವ್ ಲ್ಯಾಂಡಿಗೆ ಬರುತ್ತೇನೆ ಎಂದು ರಮೇಶ್‌ನ ಕೇಳಿದೆ. ವಿಪರೀತ ಕೋಪಗೊಂಡ ರಮೇಶ್. ನಾನು ಈ ಮನೆಯನ್ನು ಮಾರಾಟಕ್ಕೆ ಇಡುತ್ತೇನೆ. ನೀನು ಬೇಕಾದರೆ ಚಿಕಾಗೋದಲ್ಲೇ ಉಳಿದಿಕೋ. ಆದರೆ ಇಲ್ಲೇ ಉಳಿದುಕೊಳ್ಳುಲು ನೀನೇ ಜಾಗ ಹುಡುಕಿಕೊಳ್ಳಬೇಕಾಗುತ್ತೆ ಎಂದ.

ನನ್ನ ಕ್ಲಾಸ್‌ನಲ್ಲಿ ಬಂಗಾಳಿ ಹೆಂಗಸು ಒಬ್ಬಾಕೆ ಇದ್ದರು. ಆಕೆಯ ಹೆಸರು ಕಿರಣ್‌ಮಯಿ ಅಂತ. ಆಕೆ ತನ್ನ ತಂದೆ ತಾಯಿಯ ಬಳಿ ಮಾತಾಡೆಂದು ಸಲಹೆ ನೀಡಿದರು. ಅವರದು

ದೊಡ್ಡ ಮನೆ, ಆಕೆಯ ತಂದೆ ತಾಯಿ ಒಪ್ಪಿದರೆ ಅದರಲ್ಲಿ ಚಿಕ್ಕ ರೂಂ ಅನ್ನು ಬಾಡಿಗೆಗೆ ತೆಗೆದುಕೊಳ್ಳಬಹುದು. ಅವರು ಅಲ್ಲಿ ಉಳಿಯಲು ಒಪ್ಪಿಗೆ ಕೊಟ್ಟರು. ರಮೇಶ್ ಕ್ಲೀವ್ ಲ್ಯಾಂಡ್‌ಗೆ ಹೊರಟಾಗ, ನಾನು ಇವರ ಮನೆಗೆ ಬಂದೆ. ನಮ್ಮ ಮನೆಯನ್ನು ಮಾರಾಟಕ್ಕಿಡಲಾಯಿತು.

ನನ್ನ ಸ್ಥಿತಿಯಂತೂ ಭಯಂಕರವಾಗಿತ್ತು. ರಮೇಶ್‌ನ ಜೊತೆಗೆ ಕ್ಲೀವ್ ಲ್ಯಾಂಡ್‌ಗೆ ಹೋಗದಿದ್ದುದಕ್ಕೆ ನನ್ನ ಬಗ್ಗೆ ನನಗೆ ತಿರಸ್ಕಾರವಾಯಿತು. ದಿನಾಗಲೂ ಆತನಿಗೆ ಫೋನ್ ಮಾಡುತ್ತಿದ್ದೆ. ಫೋನ್ ಮಾಡಿದಾಗಲೆಲ್ಲ, ನನಗೆ ಇಲ್ಲಿನ ಫಾಸ್ಟ್ ಫುಡ್ ತಿನ್ನಲು ಆಗುತ್ತಿಲ್ಲ, ಮನೆ/ಆಫೀಸ್ ಎರಡೂ ಕಡೆ ಕೆಲಸ ಮಾಡಲು ಆಗುತ್ತಿಲ್ಲ ಎನ್ನುತ್ತಿದ್ದ. ಒಂದು ದಿನ ಫೋನ್ ಮಾಡಿ, ಮೊದಲು ನೀನು ಏನು ಮಾಡಬೇಕೆಂದು -ಕೊಂಡಿರುವೆಯೋ ಅದನ್ನು ನಿರ್ಧಾರ ಮಾಡು ಇನ್ನು ಸ್ವಲ್ಪ ದಿನಗಳಲ್ಲಿ ಇಲ್ಲಿಗೆ ನೀನು ಬರದಿದ್ದರೆ, ಡೈವೋರ್ಸ್‌ಗೆ ಫೈಲ್ ಮಾಡುತ್ತೇನೆ ಎಂದ.

ದಿನಗಳೆದಂತೆ ರಮೇಶ್‌ನ ವರ್ತನೆಯಲ್ಲಿ ನಾಟಕೀಯ ಬದಲಾವಣೆಗಳಾಗುತ್ತಾ ಬಂತು. ಕಾಲೇಜಿನ ಆಡಳಿತ ಮಂಡಳಿಗೆ ಪತ್ರಗಳನ್ನು ಬರೆದು ತಿಳಿಸುವೆ ಎಂದು ಬೆದರಿಕೆ ಹಾಕಿದ. ನಿನಗೆ ಡೈವೋರ್ಸ್ ಕೊಡುವ ಪ್ರಶ್ನೆಯೇ ಇಲ್ಲ ಸ್ವಲ್ಪ ದಿನಗಳಲ್ಲಿ ಇಲ್ಲಿಗೆ ಬರದಿದ್ದರೆ ನಿನ್ನನ್ನು ಸಾಯಿಸಿ ಬಿಡುತ್ತೇನೆ ಅಂತ ರಮೇಶ್ ಹೆದರಿಸಿದ. ಅವನು ಇಷ್ಟು ಜೋರಾಗಿ ಮಾತನಾಡುತ್ತಾನೆ ಎಂದು ನಾನೆಂದೂ ನೆನಸಿರಲಿಲ್ಲ. ಅವನು ಹೆದರಿಸುತ್ತಿರುವ ಬಗ್ಗೆ ಕಿರಣ್‌ಮಯಿಗೆ ಹೇಳಿದಾಗ, ಅಂತಹ ಪರಿಸ್ಥಿತಿ ಬಂದಾಗ ಪೋಲೀಸರಿಗೆ ತಿಳಿಸು ಎಂದರು. ಮಾರನೇ ದಿನವೇ ನಾವು ಪೊಲೀಸ್ ಸ್ಟೇಷನ್‌ಗೆ ಹೋದೆವು. ಆಫೀಸರ್ ರಮೇಶ್‌ನ ವಿರುದ್ಧ ದೂರು ಕೊಡುತ್ತೀಯ ಅಂತ ಕೇಳಿದರು. ಕಂಪ್ಲೇಂಟ್ ಕೊಡಬೇಕೆಂದು ಕೊಂಡಿದ್ದು ಒಂದು ದೊಡ್ಡ ನಿರ್ಧಾರವಾಗಿತ್ತು. ನಾನೇನಾದರೂ ಈ ದೌರ್ಜನ್ಯದ ವಿರುದ್ಧ ದೂರು ಕೊಟ್ಟರೆ ರಮೇಶ್‌ನ ಕೆಲಸ ಹೋಗಬಹುದೆಂದು ನನಗೆ ಭಯವಾಯಿತು. ರಮೇಶ್ ಯಾವಾಗಲೂ ಕ್ರೂರಿ ಅಲ್ಲ. ಬಹುಶಃ ನನ್ನ ಹೆದರಿಸಿದ ದಿನ ಅವನು ತುಂಬಾ ಬೇಸರದಲ್ಲಿದ್ದ ಅಂತ ಕಾಣುತ್ತೆ ಎಂದು ಹಿಂಜರಿಯುತ್ತಾ ಆಫೀಸರ್‌ಗೆ ಹೇಳಿದೆ. ನಾನು ದೂರು ನೀಡುವುದಿಲ್ಲವೆಂದು ನಿರಾಕರಿಸಿದೆ. ಆಫೀಸರ್ ಸಹ ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳಬಲ್ಲೆ ಎಂದರು.

ಒಂದು ವಾರದ ನಂತರ ಕಾಲೇಜ್ ಲೈಬ್ರರಿಯ ನಿರ್ದೇಶಕ ಡೇವಿಡ್ ಆಫೀಸ್‌ಗೆ ನನ್ನನ್ನು ಕರೆದು, ಒಂದು ಪತ್ರವನ್ನು ತೋರಿಸಿದ ಅದು ರಮೇಶ್‌ನಿಂದ ಬಂದುದಾಗಿತ್ತು. ಪತ್ರದಲ್ಲಿ ರಮೇಶ್, ನನ್ನ ನಡತೆ ಸರಿಯಿಲ್ಲವೆಂದೂ ತುಂಬಾ ಕೆಟ್ಟವಳು ಅಂತ ಆರೋಪ ಮಾಡಿದ್ದ. ನನ್ನನ್ನು ಚೆನ್ನಾಗಿ ಬೈಯಲು ಡೇವಿಡ್‌ಗೆ ಸಲಹೆ ನೀಡಿದ್ದ. ಅವನ ಮುಂದೆ ಕುಳಿತುಕೊಳ್ಳಲು ನನಗೆ ತುಂಬಾ ಅವಮಾನವಾಯಿತು. ಸುಮತಿ ಬೇಜಾರುಮಾಡಿಕೊಳ್ಳಬೇಡ, ನನಗೆ ಗೊತ್ತು ನೀನು ಎಂತಹ ಕಷ್ಟದಲ್ಲಿದ್ದೀಯ ಎಂದು ಈ ಪತ್ರದ ಬಗ್ಗೆ ನೊಂದುಕೊಳ್ಳಬೇಡ, ನನ್ನಿಂದ ಯಾವುದೇ ತರದ ಸಹಾಯ ಬೇಕೆಂದರೂ ಕೇಳು ಎಂದು ಡೇವಿಡ್ ಸಮಾಧಾನ ಮಾಡಿದ. ನನ್ನನ್ನು ಅರ್ಥ ಮಾಡಿಕೊಂಡಿದ್ದಕ್ಕೆ ಅವನ ಬಗ್ಗೆ ಗೌರವ ಹೆಚ್ಚಾಯಿತು.

ರಮೇಶ್ ಮಾತ್ರ ದಿನಾಗಲೂ ಮನೆಗೆ ಫೋನ್ ಮಾಡುವುದನ್ನು ಬಿಟ್ಟಿರಲಿಲ್ಲ. ನಾನು ಮನೆಯಲ್ಲಿ ಇಲ್ಲದಿದ್ದರೂ, ಕಿರಣ್‌ಮಯಿ ಅಥವಾ ಆಕೆ ತಂದೆ ತಾಯಿ ಬಳಿ ಬಲವಂತವಾಗಿ ಮಾತನಾಡಿ, ನಮ್ಮ ಸಂಬಂಧದಲ್ಲಿ ಒಡಕುಂಟು ಮಾಡಿದ್ದು ನೀವೇ ಎಂದು ಅವರ ಮೇಲೂ ಆರೋಪ ಮಾಡುತ್ತಿದ್ದ.

ಅವನ ಈ ಕೆಟ್ಟ ವರ್ತನೆ ಬಗ್ಗೆ ಪೊಲೀಸರಿಗೆ ತಿಳಿಸುವುದು ಉತ್ತಮವೆನಿಸಿತು. ಕಿರಣ್‌ಮಯಿ ಅವರ ತಾಯಿಗೆ ಈ ಕುರಿತು ಸಲಹೆ ಕೇಳಿದಾಗ ಆಕೆ ಚಿಕಾಗೋದಲ್ಲಿ ಕೌಟುಂಬಿಕ ದೌರ್ಜನ್ಯ ಎದುರಿಸುತ್ತಿರುವ ಭಾರತೀಯ ಮಹಿಳೆಯರಿಗಾಗಿ ಕೆಲಸ ಮಾಡುತ್ತಿರುವ ಸಂಸ್ಥೆ ಕುರಿತು ಹೇಳಿದರು. ತೆಲುಗು ಬಲ್ಲ ಆಕೆಯ ಸ್ನೇಹಿತೆ ಉಷಾ ಎಂಬುವವರು ಅದೇ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿರುವುದಾಗಿ ತಿಳಿಸಿದರು. ನಾನು ಮತ್ತು ಕಿರಣಮಯಿ ಉಷಾ ಅವರನ್ನು ಭೇಟಿ ಮಾಡಲು ಹೋದೆವು ಉಷಾ ತುಂಬಾ ಸಪೋರ್ಟಿವ್ ಅಂತ ಅನ್ನಿಸಿತು. ಆಕೆಯಂತೂ ಹಳೆಯ ಸ್ನೇಹಿತೆಯ ಹಾಗೆ ನನ್ನ ಬಳಿ ಮಾತನಾಡಿದಳು. ನನ್ನ ಕಥೆಯನ್ನು ಕೇಳಿದ ಮೇಲೆ ಸಹಾಯ ಮಾಡುವುದಾಗಿ ಭರವಸೆ ನೀಡಿದಳು. ನನ್ನ ಮೊದಲ ಆದ್ಯತೆ ನನ್ನ ಸುರಕ್ಷತೆಯಾಗಿದೆ ಎಂದು ಉಷಾಗೆ ಹೇಳಿದೆ. ಅದಕ್ಕೆ ಉಷಾ ಎಂದಳು, ನಿನ್ನ ಭದ್ರತೆ ಬಗ್ಗೆ ಯಾರೂ ಗ್ಯಾರಂಟಿ ಕೊಡಲಿಕ್ಕೆ ಆಗುವುದಿಲ್ಲ. ನಿನ್ನ ಮನೆ ಅಥವಾ ಆಫೀಸ್‌ನ ಹತ್ತಿರ ರಮೇಶ್ ಏನಾದರೂ ತೊಂದರೆ ಮಾಡಿದರೆ ಪೋಲೀಸರ ರಕ್ಷಣೆ ಕೇಳಬಹುದು. ಪೋಲೀಸರಿಂದ ರಕ್ಷಣೆ ಪಡೆಯಲು ನಾನು ಒಪ್ಪಿಕೊಂಡಾಗ, ಮಾರನೇ ದಿನ ಉಷಾ ಸಹ ನನ್ನ ಜೊತೆ ಪೋಲೀಸ್ ಠಾಣೆಗೆ ಬಂದರು.

ಇನ್ನು ನನ್ನಲ್ಲಿ ಸ್ವಲ್ಪ ಭದ್ರತೆಯ ಭಾವನೆ ಬರಲು ಪ್ರಾರಂಭವಾಗಿತ್ತು. ಅಷ್ಟರಲ್ಲೇ ರಮೇಶ್ ಲಾಯರ್‌ರಿಂದ ಒಂದು ನೋಟಿಸು ಬಂತು. ರಮೇಶ್ ಡೈವೋರ್ಸ್‌ಗೆ ಅಪ್ಲೈ ಮಾಡಿದ್ದ. ಈ ತರಹ ಆಗುತ್ತೇ ಅಂತ ನಾನು ಮೊದಲೇ ನಿರೀಕ್ಷಿಸಿದ್ದೆ. ಆದರೂ ಮದುವೆಯ ಬಂಧನವನ್ನ ಮುರಿದು

ಕೊಳ್ಳುವುದನ್ನ ಊಹಿಸಲು ನನ್ನಿಂದ ಸಾಧ್ಯವಾಗಲಿಲ್ಲ. ಆದರೆ ನನಗೆ ತುಂಬಾ ಬೇಸರವಾಗಿದ್ದು ಆ ಪತ್ರದಲ್ಲಿ, ಅಮೇರಿಕಾಗೆ ಬರಲು ನಾನು ಮೋಸ ಮಾಡಿ ರಮೇಶ್‌ನನ್ನ ಮದುವೆಯಾಗಿದ್ದೆ ಎಂದಿತ್ತು. ಭಾರತಕ್ಕೆ ಗಡಿಪಾರು ಮಾಡುವಂತೆ ಕೋರ್ಟಿನಲ್ಲಿ ಕೇಳಿದ್ದ.

ನನಗಂತೂ ತುಂಬಾ ದುಃಖವಾಗಿತ್ತು. ಡೈವೋರ್ಸ್ ಕೊಡಲು ಭಯವಿರಲಿಲ್ಲ. ಆದರೆ ಗಡೀಪಾರು ಮಾಡುವುದು ನನ್ನಲ್ಲಿ ದಿಗಿಲು ಹುಟ್ಟಿಸಿತ್ತು. ಈ ಮನುಷ್ಯ ಎರಡು ವಾರ ರಜೆ ಹಾಕಿ ಮದುವೆಯಾಗಲು ಭಾರತಕ್ಕೆ ಬಂದಿದ್ದ. ನೋಡಿದ ಐದು ಮಂದಿಯಲ್ಲಿ ನನ್ನನ್ನು ಒಪ್ಪಿಕೊಂಡಿದ್ದ. ಮದುವೆಯು ತರಾತುರಿಯಲ್ಲಿ ನಡೆಯಿತು. ಯಾಕೆಂದರೆ ಚಿಕಾಗೋದಲ್ಲಿನ ಕೆಲಸಕ್ಕೆ ಹಾಜರಾಗಬೇಕಿತ್ತು. ಆದರೆ ಈಗ ದಾವೆ ಹೂಡಿರುವುದು ನಾನು ಅವನನ್ನ ಮೋಸ ಮಾಡಿ ಮದುವೆಯಾದೆ ಎಂದು ! ಕೋರ್ಟ್ ಏನಾದರೂ ಅವನ ಪರ ತೀರ್ಪು ನೀಡಿದರೆ ಹೇಗೆ ? ಅಥವಾ ನನ್ನನ್ನ ಗಡಿಪಾರು ಮಾಡುತ್ತದೆಯೇ ? ಹೀಗಾದಾಗ ನಿಮಗೆ ಹಾಗೂ ಅಮ್ಮನಿಗೆ ಎಷ್ಟು ಅವಮಾನವಾಗುತ್ತದೆ ಎಂದು ಕಲ್ಪಿಸಿಕೊಂಡಾಗ ಭಯವಾಯಿತು.

ಮರುದಿನವೇ ಉಷಾಳ ಸಹಾಯ ಪಡೆಯಲು ಹೊರಟೆ. ನನ್ನನ್ನು ಸಮಾಧಾನ ಪಡಿಸಿದಳು. ಆದರೆ ಮೊದಲಿನ ಹಾಗೆ ಆತ್ಮೀಯವಾಗಿ ನಡೆದುಕೊಳ್ಳಲಿಲ್ಲ. ನನಗೆ ತುಂಬಾ ಆಶ್ಚರ್ಯವಾಯಿತು. ಇಂತಹ ಕೇಸುಗಳು ಸಾಮಾನ್ಯವೆಂದು ಆಕೆ ಹೇಳಿದಾಗ ಅರ್ಥವಾಯಿತು. ಗಂಡಂದಿರು ತಮ್ಮ ಮಡದಿಯರ ಮೇಲೆ ಇಂತಹ ಆರೋಪ ಮಾಡಿರುವ ಎಷ್ಟೋ ಕೇಸುಗಳನ್ನು ಆಕೆ ನೋಡಿದ್ದಾಳೆ. ಉಷಾ ಲಾಯರನ್ನು ಭೇಟಿ ಮಾಡಲು ಸಮಯ ಪಡೆದಳು. ನಾವಿಬ್ಬರೂ ಲಾಯರನ್ನ ನೋಡಲು ಹೊರಟೆವು. ಆ ಲಾಯರ್ ಚೈನಾದ ಯುವತಿ. ಹೆಸರು ಮ್ವೇಚಾಂಗ್. ಆಕೆಯು ಸಹ ನನ್ನ ಹಾಗೆ ವಲಸೆ ಬಂದವಳು. ಉಷಾಗೆ ಒಳ್ಳೆಯ ಸ್ನೇಹಿತೆ. ನನ್ನ ಕೇಸನ್ನು ತೆಗೆದುಕೊಳ್ಳಲು ಒಪ್ಪಿಕೊಂಡಳು. ನನ್ನ ಬಳಿ ಹಣವಿಲ್ಲದ ಕಾರಣ ಎಷ್ಟು ಫೀಜನ್ನು ತೆಗೆದುಕೊಳ್ಳುವಳು ಎಂದು ತಿಳಿಯಲಿಲ್ಲ ನನ್ನ ಬಳಿ ಹಣವಿದ್ದಾಗ ಹಿಂತಿರುಗಿಸ ಬಹುದೆಂದು ಉಷಾ ಸಲಹೆ ಮಾಡಿದರು. ಆಕೆಗೆ ಆಕೆಯ ಸಂಸ್ಥೆ ಫೀಜು ಕೊಡುತ್ತದೆ ಎಂದಾಗ ನನ್ನ ಕಣ್ಣು ತುಂಬಿ ಬಂತು. ಹೇಗೆ ಆಕೆಗೆ ನಾನು ಕೃತಜ್ಞತೆ ಹೇಳಲಿ? ಉಷಾ ನನ್ನ ಹಿರಿಯಕ್ಕನ ಹಾಗೆ ಕಂಡಳು.

ಈ ನಾಲ್ಕು ತಿಂಗಳಲ್ಲಿ ಡೈವೋರ್ಸ್ ಸಂಬಂಧಪಟ್ಟಂತೆ ಕೋರ್ಟಿನಲ್ಲಿ ಎರಡು ಬಾರಿ ವಿಚಾರಣೆ ಆಯಿತು. ಎರಡು ಸಾರಿನೂ ಉಷಾ ನನ್ನ ಜೊತೆ ಕೋರ್ಟಿಗೆ ಬಂದಿದ್ದಳು. ನನ್ನ ಪರವಾಗಿ ಉಷಾ ಸಾಕ್ಷಿ ಹೇಳುವಾಗ, ರಮೇಶ್ ಮದುವೆಯಾದದ್ದು ಬರೀ ವಲಸೆ ಬರಲಿಕ್ಕಾಗಿ ಎಂಬುದು ಸತ್ಯಕ್ಕೆ ದೂರವಾದ ಮಾತೆಂದು ಹೇಳಿದಳು.

ರಮೇಶ ಹೇಗೆ ನನ್ನನ್ನು ಬೆದರಿಸುತ್ತಿದ್ದ ಎಂಬುದನ್ನು ಉಷಾ ಮತ್ತು ಪೋಲೀಸ್ ಆಫೀಸರ್ ಇಬ್ಬರು ಕೊಟ್ಟ ಹೇಳಿಕೆಯನ್ನು ನ್ಯಾಯಾಧೀಶರು ಕೇಳಿದರು. ವಾದ ವಿವಾದಗಳ ನಂತರ ನ್ಯಾಯಾಧೀಶರು ನನಗೆ ಡೈವೋರ್ಸ್ ನೀಡಲು ತೀರ್ಪನ್ನಿತ್ತರು. ಇನ್ನು ಮುಂದೆ ಈ ವಲಸೆ ಹಾಗೂ ಗಡಿಪಾರಿನ ವಿಷಯದಲ್ಲಿ ಯಾವುದೇ ತೊಂದರೆಯಾಗುವುದಿಲ್ಲವೆಂದು ಶ್ರೀಮತಿ ಚಾಂಗ್ ಅವರು ನನಗೆ ಭರವಸೆ ನೀಡಿದರು.

ನಂತರವೂ ಕಿರಣ್ ಮಯಿ ಅವರ ಕುಟುಂಬದವರ ಜೊತೆಯಲ್ಲಿಯೇ ಉಳಿದುಕೊಂಡೆ. ಅದೇ ಕಮ್ಯುನಿಟಿ ಕಾಲೇಜಿನಲ್ಲಿ ಕೆಲಸ. ಎರಡು ಮೂರು ವರ್ಷದಲ್ಲಿ ಸ್ವಲ್ಪ ಹಣವನ್ನು ಉಳಿಸಿ, ಚಿಕಾಗೋದಲ್ಲಿನ ಲಾ ಸ್ಕೂಲ್‌ಗೆ ಸೇರಿಕೊಂಡಿದ್ದೇನೆ. ನಿನ್ನ ಹಾಗೆ ನಾನು ಒಂದು ದಿನ ಲಾಯರ್ ಆಗುತ್ತೇನೆ.

ನನ್ನ ಮದುವೆ ಮಾಡಿ ನಿಮ್ಮ ಜವಾಬ್ದಾರಿ ಮುಗಿಯಿತು ಅಂತ ಅಂದುಕೊಂಡಿರಿ. ನನಗೆ ಗೊತ್ತು ನಾನು ಚೆನ್ನಾಗಿ ಸೆಟಲ್ ಆಗಿದ್ದರೆ ಅಮ್ಮನಿಗೆ ಮತ್ತು ನಿಮಗೆ ಖುಷಿಯಾಗುತ್ತಿತ್ತು. ನನ್ನ ದುರಾದೃಷ್ಟ ಹಾಗಾಗಲಿಲ್ಲ ಬಂಗಾರದ ಪಂಜರದಲ್ಲಿ ಒಂಟಿಯಾಗಿ ಬದುಕಲು ನನಗೆ ಆಗಲಿಲ್ಲ. ಈ ದಿನ ನನಗೆ ಗಂಡನಿಲ್ಲ, ಆದರೆ ನಾನು ಸಂತೋಷವಾಗಿದ್ದೇನೆ. ನನಗೆ ಗೊತ್ತಿಲ್ಲ ನನ್ನ ಮುಂದಿನ ಭವಿಷ್ಯ ಹೇಗಿರುತ್ತದೆಂದು. ಏನೇ ಆಗಲೀ ಬಂದಿದ್ದನ್ನ ಎದುರಿಸಿ ಜೀವನ ರೂಪಿಸಿಕೊಳ್ಳುದನ್ನ ಕಲಿಯುತ್ತೇನೆ.

ನೀವು ಮತ್ತು ಅಮ್ಮ ನನ್ನ ಬಗ್ಗೆ ಬೇಸರ ಮಾಡಿಕೊಳ್ಳುವುದಿಲ್ಲ ಎಂದು ನಂಬಿದ್ದೇನೆ. ನಾನು ನಿಮ್ಮನ್ನು ತುಂಬಾ ಪ್ರೀತಿಸುತ್ತೇನೆ.

ನನ್ನ ಈಗಿನ ವಿಳಾಸ ಕವರ್ ಮೇಲಿದೆ. ಇನ್ನು ಮುಂದೆ ಈ ವಿಳಾಸಕ್ಕೆ ಪತ್ರ ಬರೆಯಿರಿ.

ಅಮ್ಮನಿಗೆ ನನ್ನ ನೆನಪುಗಳನ್ನು ತಿಳಿಸಿ. ನನ್ನ ಬಗ್ಗೆ ಹೆಚ್ಚು ಚಿಂತೆ ಮಾಡಬೇಡಿ.

ಪ್ರೀತಿಯಿಂದ

ಸುಮತಿ

ಪ್ರೀತಿಯ ಸುಮತಿ,

ನಿನ್ನ ಪತ್ರ ಸೇರಿತು. ನಿನ್ನ ನಿರ್ಧಾರಗಳ ಬಗ್ಗೆ ನನಗೆ ಮೆಚ್ಚುಗೆ ಇದೆ. ನಿಮ್ಮ ತಂದೆ ಮತ್ತು ನಾನು ಒಂದು ವರ್ಷದಿಂದ ಚೆನ್ನಾಗಿಲ್ಲ. ನಾವು ಸಂಕಟಪಟ್ಟುಕೊಳ್ಳುತ್ತೇವೆಂಬ ಭಯದಿಂದ ಈ ಬಗ್ಗೆ ನೀನು ಪತ್ರದಲ್ಲಿ ಬರೆಯದೇ ಇದ್ದರೂ ಇವೆಲ್ಲದರ

ಕುರಿತು ನಮಗೆ ತಿಳಿದಿತ್ತು. ರಮೇಶ್‌ನ ತಂದೆ ಕೆಲವು ತಿಂಗಳ ಹಿಂದೆ ಇಲ್ಲಿಗೆ ಬಂದು, ನಿನ್ನ ವರ್ತನೆ ಸರಿಯಾಗಿಲ್ಲ, ಹಾಗೇ ಇದ್ದಲ್ಲಿ ನನ್ನ ಮಗ ಡೈವೋರ್ಸ್ ಕೊಡುತ್ತಾನೆ ಎಂದು ನಿನ್ನ ಬಗ್ಗೆ ದೂರಿ ಹೋದರು. ಅವರು ಹೋದ ನಂತರ ನಮಗೆ ಯೋಚನೆಯಾಯಿತು. ನಡೆದಿರುವ ಎಲ್ಲಾ ವಿಚಾರಗಳನ್ನು ತಿಳಿದುಕೊಳ್ಳದೇ ನಿನಗೆ ಸಲಹೆ ನೀಡುವುದು ಬೇಡವೆಂದು ನಾವು ನಿರ್ಧರಿಸಿದೆವು. ನಮಗೆ ಗೊತ್ತಿತ್ತು ನೀನು ಯಾವುದೇ ತಪ್ಪು ಮಾಡಿರುವುದಿಲ್ಲವೆಂದು.

ಈಗ ನಿನ್ನ ಪತ್ರ ನನಗೆ ಸಮಾಧಾನ ತಂದಿದೆ. ನನಗೆ ಮಾತ್ರ ನೀನು ಸಂತೋಷವಾಗಿ, ಶಾಂತಿಯಾಗಿ ಇರುವುದೇ ಮುಖ್ಯ. ನಿನ್ನ ಅಪ್ಪ ಈ ದಿನ ಮನೆಯಲ್ಲಿ ಇಲ್ಲ. ನಿನ್ನೆ ಹೈದರಾಬಾದ್‌ಗೆ ಹೋದರು. ಇನ್ನೆರಡು ದಿನಗಳಲ್ಲಿ ಬರಬಹುದು. ಈ ನಿನ್ನ ಪತ್ರ ಓದಿದಾಗ ನಿಜವಾಗಿ ನಿಮ್ಮ ತಂದೆಗೆ ಸಂತೋಷವಾಗುತ್ತದೆ. ಖಂಡಿತವಾಗಿ ಅವರು ಬಂದ ತಕ್ಷಣ ನಿನಗೆ ಪತ್ರ ಬರೆಯುತ್ತಾರೆ.

ನಿನ್ನ ಬೆಂಬಲಕ್ಕೆ ಮತ್ತು ಅರ್ಥ ಮಾಡಿಕೊಳ್ಳಲು ಉಷಾ ಮತ್ತು ಕಿರಣ್‌ಮೊಯಿ ಅಂತಹ ಜನರಿದ್ದಾರೆ. ನಿಜವಾಗಲೂ ಅದು ನಿನ್ನ ಅದೃಷ್ಟ. ಅವರ ಸಹಾಯಕ್ಕೆ ನನ್ನ ಕೃತಜ್ಞತೆಯನ್ನು ತಿಳಿಸು. ನಮ್ಮ ಊರಿಗೆ ಖಂಡಿತಾ ಕರೆದುಕೊಂಡು ಬಾ.

ನಿನ್ನ ಹಿಂದಿನ ಅನುಭವದಿಂದ ಶಾಂತಿಯಿಂದ, ನೆಮ್ಮದಿಯಿಂದ ಬದುಕುವುದನ್ನು ಕಲಿತಿದ್ದೀಯ. ವಾರಕ್ಕೊಮ್ಮೆಯಾದರೂ ಪತ್ರ ಬರೆಯುತ್ತಿರು.

ಪ್ರೀತಿಯಿಂದ,
ನಿನ್ನ ಅಮ್ಮ

-ಅನುವಾದ: **ಶ್ಯಾಮಲ, ಕೋಲಾರ**

# 'ಆ್ಯಸಿಡ್' ಮಹಿಳೆಯರನ್ನು ಹತ್ತಿಕ್ಕಲು ಮತ್ತೊಂದು ಅಸ್ತ್ರ

*ಇತ್ತೀಚೆಗೆ ಬೆಂಗಳೂರಿನಲ್ಲಿ ಆ್ಯಸಿಡ್‌ದಾಳಿಗೆ ಅನೇಕ ಹುಡುಗಿಯರು ಬಲಿಯಾಗುತ್ತಿರುವ ಸುದ್ದಿ ಸಾಮಾನ್ಯವಾಗುತ್ತಿದೆ. ಇಂತಹ ಪ್ರಕರಣಗಳನ್ನು ತಡೆಗಟ್ಟುವಲ್ಲಿ ಮತ್ತು ಜನ ಜಾಗೃತಿ ಮೂಡಿಸುವ ನಿಟ್ಟನಲ್ಲಿ 'ಮಹಿಳಾ ಜಾಗೃತಿ' ಯು ಇತ್ತೀಚೆಗೆ ಮೆರವಣಿಗೆ ಮತ್ತು ಕಮೀಷನರ ಕಛೇರಿಯ ಎದುರು ಧರಣಿ ಹಮ್ಮಿಕೊಂಡಿತ್ತು. ಆ ಸಂದರ್ಭದಲ್ಲಿ 'ಮಹಿಳಾ ಜಾಗೃತಿ' ತಯಾರಿಸಿದ ಕರಪತ್ರವನ್ನು 'ಮಾನಸ' ಓದುಗರಿಗಾಗಿ ಪ್ರಕಟಿಸುತ್ತಿದ್ದೇವೆ.*

'ಐಯ್ ಲವ್ ಮಾಡೇ, ನಂಜೊತೆ ಬಾರೆ, ನನಗೆ ತಿರುಗಿ ಹೇಳ್ತೀಯ...ಹೇಳೇ ?
ಲವ್ ಮಾಡ್ತೀಯ ಇಲ್ವ...... ಹೇಳೇ ಹೇಳೇ'
'ಇಲ್ಲ ನಂಗಿಷ್ಟ ಇಲ್ಲ'
'ಇಷ್ಟ ಇಲ್ವೇನೇ, ತಾಳು
'ಅಮ್ಮಾ....'

ಮುಗಿಯಿತು. ಆಕೆಯ ಬದುಕು, ಕನಸು, ಆಸೆ ಆಕಾಂಕ್ಷೆಗಳೆಲ್ಲವೂ ಆ್ಯಸಿಡ್‌ನೊಳಗೆ ಕರಗಿ ಬೂದಿಯಾದವು. ಈ ಆ್ಯಸಿಡ್ ದಾಳಿ ಇತ್ತೀಚಿನ ವರ್ಷಗಳಲ್ಲಿ ಹುಟ್ಟಿಕೊಂಡಿರುವ ಹೊಸ ರೂಪ. ಇದರ ದಾಳಿಯಿಂದ ಬಲಿಯಾದ ಹುಡುಗಿಯರು ಒಬ್ಬರೇ, ಇಬ್ಬರೇ? 1999ರಲ್ಲಿ ಹಸೀನಾ, ಇದಕ್ಕಿಂತ ಮುಂಚೆ ಇಬ್ಬರು ಲೈವ್‌ಬ್ಯಾಂಡ್ ಹುಡುಗಿಯರು, 2000ರಲ್ಲಿ ನೂರ್‌ಜಹಾನ್, ರಾಜಗೋಪಾಲನಗರದ ಮಹಿಳೆ, 2000ರಲ್ಲಿ ಅತ್ತಿಗುಪ್ಪೆಯ ಶಾಲಿನಿ, ಮೈಸೂರಿನ ಶಾಂತಿ ಮತ್ತು ಈಗ ಜೆ.ಪಿ.ನಗರದ ಶೃತಿ!

ಇತ್ತೀಚೆಗೆ 12 ಆಗಸ್ಟ್ 2002 ರಂದು ಜೆ.ಪಿ.ನಗರದ ಎಸ್.ಎಸ್.ಎಲ್.ಸಿ. ಮುಗಿಸಿದ ಹುಡುಗಿ 'ಶೃತಿ' ಆ್ಯಸಿಡ್‌ದಾಳಿಗೆ ಬಲಿಯಾಗಿ ಆಸ್ಪತ್ರೆಯಲ್ಲಿ ನರಳುತ್ತಿದ್ದಾಳೆ. ಈ ಮೇಲಿನ ಪ್ರಕರಣಗಳನ್ನೆಲ್ಲಾ ಜಾಲಾಡಿ ನೋಡಿದರೆ, ಗೋಚರವಾಗುವುದು ಒಂದೇ ; ಇನ್ನೊಬ್ಬನ ಕಾಮುತೃಷೆಗೆ, ವಿಕೃತ ಮನಸ್ಸಿಗೆ ಮುಗ್ಧರ ಬಲಿ. ತನಗೆ ಸಿಕ್ಕದ ಹುಡುಗಿ, ತನ್ನೊಂದಿಗೆ ಬರದ ಹುಡುಗಿ, ಇನ್ನೊಬ್ಬನಿಗೆ ಆಗಬಾರದು ಎಂದು ಅವಳನ್ನೂ ಕುರೂಪಗೊಳಿಸಲಾಗಿದೆ. ಮೊದಲೇ, ಮಹಿಳೆಯ ಅಸ್ತಿತ್ವವೆಂದರೆ ಬರೀ ಆಕೆಯ ಬಾಹ್ಯ ಸೌಂದರ್ಯ, ಆ ಸೌಂದರ್ಯದಿಂದಲೇ ಸಮಾಜದಲ್ಲಿ ಗೌರವ ಎಂದೆಲ್ಲ ಇರುವಾಗ, ಅದನ್ನು ಹಾಳು ಮಾಡಿದರೆ ಎಲ್ಲವೂ ಮುಗಿಯಿತು ಎಂಬ ಲೆಕ್ಕಾಚಾರದಿಂದ ಈ ರೀತಿ ಮಾಡುತ್ತಿದ್ದಾರೆ.

ಇದಕ್ಕೆಲ್ಲ ಪ್ರೇರಣೆ ಏನು? ಪ್ರೇರಣೆ ಇವತ್ತಿನ ಮಾಧ್ಯಮ. ಮಾಧ್ಯಮಗಳಲ್ಲಿ ಮಹಿಳೆಯರನ್ನು ಚಿತ್ರಿಸುವ ರೀತಿಯ ಪ್ರತಿಫಲ ಸಮಾಜದ ಮೇಲೆ ಹೀಗಾಗಿದೆ. ಮಹಿಳೆ ಇರುವುದೇ ಮೋಜಿಗಾಗಿ ಅರೆಬೆತ್ತಲೆ ಕುಣಿಯುವುದಕ್ಕಾಗಿ, ತನಗೆ ಸಿಗದವಳು ಬೇರೊಬ್ಬರಿಗೆ ಸಿಗಬಾರದೆಂಬ ಕಲ್ಪನೆಯ ಚಿತ್ರಗಳು ಯುವಕರ ಮನಸ್ಸನ್ನು ವಿಚಲಿತಗೊಳಿಸಿವೆ. ತಾನು ಅದೇ ರೀತಿ ವರ್ತಿಸಬೇಕೆಂಬ ಹುಚ್ಚು ಅವರಿಂದ ಈ ರೀತಿ ಮಾಡಿಸುತ್ತಿದೆ. ಇಂತಹ ಸಿನಿಮಾಗಳಿಗೆ ಕಡಿವಾಣ ಹಾಕಬೇಕೆಂಬ ಕನಿಷ್ಠ ಪ್ರಜ್ಞೆಯು ನಮ್ಮ ಸರ್ಕಾರಕ್ಕಿಲ್ಲ.

ಇತ್ತೀಚಿನ ದಿನಗಳಲ್ಲಿ ಸಮಾಜದಲ್ಲಿ ಉಂಟಾಗುತ್ತಿರುವ ಬದಲಾವಣೆಗಳನ್ನು ಗಮನಿಸಿದರೆ, ಸಣ್ಣಪುಟ್ಟ ಕಾರಣಗಳಿಗೆ (ಕೆಲವೊಮ್ಮೆ ಕಾರಣಗಳೇ ಇಲ್ಲದೆ) ಮಹಿಳೆಯರ ಮೇಲಿನ ದೌರ್ಜನ್ಯಗಳ ಪ್ರಮಾಣ ಆಘಾತಕಾರಿಯಾಗಿ ಹೆಚ್ಚುತ್ತಿದೆ. ಮನೆಯಲ್ಲಂತೂ ಮಹಿಳೆಯರು ವರದಕ್ಷಿಣೆ ಹಿಂಸೆ, ಆಗಾಗ್ಗೆ ಹೊಡೆಸಿಕೊಳ್ಳುವುದು, ಹಿಂಸೆ ಅನುಭವಿಸುವುದು, ಕೊಲ್ಲಲ್ಪಡುವುದು, ನಡೆಯುತ್ತಲೇ ಇದೆ. ಅದರ ಜೊತೆಗಿನ ಹೊರಗಿನ ಸಮಾಜದಲ್ಲೂ ಅವರು ಸ್ವಲ್ಪ ಪ್ರತಿರೋಧ ತೋರಿದರೂ, ಧ್ವನಿ ಎತ್ತಿದರೂ ಹಲವಾರು ಕಿರುಕುಳಗಳನ್ನು ಅನುಭವಿಸಬೇಕಾಗುತ್ತದೆ. ಮಾಟಗಾತಿ, ಭಾನಾಮತಿ ಮಾಡುವವಳು ಮುಂತಾದ ಆಪಾದನೆ ಹೊರಿಸಿ, ಬಟ್ಟೆ ಬಿಚ್ಚಿಸಿ ಅವಮಾನ ಮಾಡುವುದು ಇತ್ಯಾದಿ. ಇದೆಲ್ಲಕ್ಕಿಂತ ತಮ್ಮ ಅಧಿಕಾರದ ಹೇರಿಕೆಗೆ, ಅವರನ್ನು ಹತ್ತಿಕ್ಕುವುದಕ್ಕೆ, ಅತ್ಯಾಚಾರವೆಂಬುದನ್ನು ಸಾಧನದಂತೆ ಬಳಸಲಾಗುತ್ತದೆ. ಒಮ್ಮೆ ಅತ್ಯಾಚಾರಕ್ಕೊಳಗಾದರೆ ಅವಳ ಜೀವನವೇ ಕೊನೆಯಾದಂತೆ ಎಂಬ ಮೌಲ್ಯ ಇಂಥದಕ್ಕೆ ಮತ್ತಷ್ಟು ಪ್ರೋತ್ಸಾಹ ನೀಡುತ್ತದೆ. ಎಳೆಯ ಹೆಣ್ಣು ಮಕ್ಕಳ ಮೇಲೆ ಹೆಚ್ಚುತ್ತಿರುವ ಅತ್ಯಾಚಾರ ಇವುಗಳ ಸಾಲಿಗೆ ಸೇರಿಕೊಂಡಿದೆ. ಇದೇ ಆಗಸ್ಟ್ 28ರಂದು ಇಬ್ಬರು ಬಾಲಕಿಯರು ಅತ್ಯಾಚಾರಕ್ಕೆ ಬಲಿಯಾಗಿದ್ದಾರೆ.

ಸಮಸ್ಯೆಗಳನ್ನು ಹೇಗೋ ಮೆಟ್ಟಿ ನಿಲ್ಲಲು ಪ್ರಯತ್ನಿಸುತ್ತಿರುವಾಗಲೇ ಈ ಆ್ಯಸಿಡ್ ದಾಳಿ ತಲೆಯೆತ್ತಿ ನಿಲ್ಲುತ್ತಿದೆ. ಇದು ಎಲ್ಲದರಕ್ಕಿಂತ ಆಘಾತಕಾರಿಯೂ, ಅಪಾಯಕಾರಿಯು ಆಗಿದೆ. ಆಗಲೇ ತಿಳಿಸಿದಂತೆ ಮಹಿಳೆಯರ ಅಸ್ತಿತ್ವವೇ ಸೌಂದರ್ಯವೆಂದು ಇರುವಾಗ ಅದನ್ನೇ ಹಾಳುಗೆಡವಿ ಸಂತೋಷಪಡುವಂಥ ವಿಕೃತಿ, ಅವಳ ಆತ್ಮವಿಶ್ವಾಸವನ್ನು ಕುಗ್ಗಿಸುವ, ಯಾವುದಕ್ಕೂ ಪ್ರತಿರೋಧ ವ್ಯಕ್ತಪಡಿಸಿದಂತೆ ಮಾಡುವ ಹುನ್ನಾರ. ಅತ್ತ ಸಾಯಲೂ ಆಗದೆ ಇತ್ತ ಬದುಕಲೂ ಆಗದೆ ಜೀವನ ಪೂರ್ತಿ, ಜೀವಂತ ಶವದಂತೆ ಬದುಕು ಸವೆಸುವ ಪರಿಸ್ಥಿತಿಗೆ ಹುಡುಗಿಯರನ್ನು ತಳ್ಳುವ ಕ್ರೂರತನ ಇದಾಗಿದೆ. ಒಂದಿಡೀ ಮಹಿಳಾ ಸಮುದಾಯವೇ ಧ್ವನಿ ಎತ್ತದಂತಹ ಪರಿಸ್ಥಿತಿ ಬರುತ್ತಿದೆ.

ಇಂತಹ ಹೀನವಾದ ಕೃತ್ಯಕ್ಕೆ ನಮ್ಮ ಮಹಾನ್ ಕಾನೂನಿನಲ್ಲಿ ಯಾವುದೇ ರೀತಿಯ ಸರಿಯಾದ ಶಿಕ್ಷೆ ಇಲ್ಲದಿರುವುದು ತಲೆತಗ್ಗಿಸುವ ವಿಚಾರ. ಆ್ಯಸಿಡ್ ಎರಚುವುದನ್ನು ಕೊಲೆ ಮಾಡುವ ಪ್ರಯತ್ನ ಎಂದು ಪರಿಗಣಿಸಿ 307 ಐಪಿಸಿ ಯಡಿಯಲ್ಲಿ ತರಲಾಗಿದ್ದರೂ ಅಪರಾಧಿಗಳು ಆರಾಮವಾಗಿ ಬೇಲ್ ಪಡೆದುಕೊಂಡು ರಾಜಾರೋಷವಾಗಿ ಮೆರೆಯಬಹುದು, ಬಲಿಯಾದವರಿಗೆ ಯಾವುದೇ ರೀತಿಯ ಪರಿಹಾರವಿಲ್ಲ. ಹಾಗಾಗಿ ಕಾನೂನಿನಲ್ಲಿ ಅವರಿಗೆ ಸರಿಯಾದ ಯಾವುದೇ ಶಿಕ್ಷೆ ಇಲ್ಲದಿರುವುದರಿಂದ ಅಪರಾಧಿಗಳಿಗೆ ಇನ್ನೂ ಒಳ್ಳೆಯದೇ ಆಗಿದೆ. ಹಾಗಾಗಿ ಆತ ತಾನು ಮಾಡಬೇಕಾದ್ದನ್ನೆಲ್ಲ ಮಾಡಿ ಹುಡುಗಿಗೆ, ಆಕೆಯ ತಂದೆ-ತಾಯಿಗಳಿಗೆ ಕೊಡಬೇಕಾದಷ್ಟು ನೋವನ್ನು ಕೊಟ್ಟು ವಿಕೃತ ಆನಂದ ಪಡೆಯುತ್ತಾನೆ. ಮೊದಲು ಈ ರೀತಿ ಮಾಡಿದವರಿಗೆ ಸರಿಯಾದ ಶಿಕ್ಷೆ ಆಗಿದ್ದಿದ್ದರೆ ಬೇರೊಬ್ಬರಿಗೆ ಇದು ಪ್ರೇರಣೆ ಆಗುತ್ತಿರಲಿಲ್ಲ. ಹಾಗಾಗಿ ಇವೆಲ್ಲವು ಸರ್ಕಾರದ ಕಾನೂನಿನ ಪಾಲಕರ ಬೇಜವಾಬ್ದಾರಿಗೆ ನಿಷ್ಕ್ರಿಯತೆಗೆ ಹಿಡಿದ ಕನ್ನಡಿಯಾಗಿವೆ.

ಹಾಗಿದ್ದರೆ ಇವೆಲ್ಲ ತಿಳಿದ ಮೇಲು ನಾವು ಅನುಕಂಪ ತೋರಿಸಿ ಅಯ್ಯೋ ಪಾಪ ಎಂದರೆ ಸಾಕೆ? ಖಂಡಿತ ಇಲ್ಲ, ನಾವು ಬಲಿಪಶುವಾದ ಹುಡುಗಿಗೆ ಅನುಕಂಪ ತೋರಿಸಿ ಸುಮ್ಮನಾದರೆ, ನಾವು ಕೂಡಾ ಇದಕ್ಕೆ ಪ್ರೋತ್ಸಾಹ ನೀಡಿದಂತಾಗುತ್ತದೆ. ಬೇರೊಬ್ಬರಿಗೆ ಆದದ್ದು ನಮಗಾಗುವುದಿಲ್ಲವೆಂದಲ್ಲ. ಇದನ್ನು ಹೀಗೆ ಬಿಟ್ಟರೆ ಮುಂದೊಂದು ದಿನ ಆಸ್ಪತ್ರೆಗಳಲ್ಲಿ ಆ್ಯಸಿಡ್ ಪ್ರಕರಣಗಳಿಗೆ ಪ್ರತ್ಯೇಕ ವಾರ್ಡ್ ಪ್ರಾರಂಭವಾಗುವುದರಲ್ಲಿ ಅನುಮಾನವಿಲ್ಲ. ಹಿಂದೆ ಅಲ್ಲೊಂದು ಇಲ್ಲೊಂದು ನಡೆಯುತ್ತಿದ್ದ ವರದಕ್ಷಿಣೆ ಕೊಲೆಗಳು ಇವತ್ತು ದಿನನಿತ್ಯದ ಸಾಮಾನ್ಯ ಸಂಗತಿ ಎನ್ನಿಸಿಕೊಂಡಿವೆ. ಹಾಗೆಯೇ ನಾಳೆ ಆ್ಯಸಿಡ್ ಪ್ರಕರಣಗಳೂ ಪ್ರತಿ ದಿನ ನಡೆಯಲು ಪ್ರಾರಂಭವಾಗುತ್ತವೆ. ಆದ್ದರಿಂದ ನಾವೆಲ್ಲರೂ ಸಂಘಟಿತರಾಗಿ ಇದರ ವಿರುದ್ಧ ಹೋರಾಡಲೇಬೇಕಿದೆ. ಅಪರಾಧಿಗಳಿಗೆ ಶಿಕ್ಷೆ ವಿಧಿಸಲೇಬೇಕಿದೆ.

ಹಾಗಾಗಿ 'ಮಹಿಳಾ ಜಾಗೃತಿ'ಯು 30-08-02 ರಂದು ಮೆರವಣಿಗೆ ಮತ್ತು ಕಮೀಷನರ ಕಛೇರಿಯ ಎದುರು ಧರಣಿ ಹಮ್ಮಿಕೊಂಡಿದೆ. ಮತ್ತೊಬ್ಬ ಶೃತಿ, ಹಸೀನಾ, ನೂರ್‌ಜಾನ್ ಹುಟ್ಟುವ ಮೊದಲೇ, ಇನ್ನೊಂದು ತಾಯಿಯ ಗೋಳಾಟ ನೋಡುವ ಮೊದಲೇ ಇಂತಹದನ್ನು ತಡೆಗಟ್ಟುವುದು ಪ್ರತಿಯೊಬ್ಬ ಜವಬ್ದಾರಿಯುತ ನಾಗರಿಕರ ಕರ್ತವ್ಯ.

ಆದ್ದರಿಂದ ಬನ್ನಿ, ನಮ್ಮೊಂದಿಗೆ ಕೈಗೂಡಿಸಿ

**ನಮ್ಮ ಬೇಡಿಕೆಗಳು :**

- ಆ್ಯಸಿಡ್ ಎರಚಿರುವ ಅಪರಾಧಿಗಳಿಗೆ ಯಾವ ಕಾರಣಕ್ಕೂ ಜಾಮೀನು ದೊರೆಯಬಾರದು.
- ದೌರ್ಜನ್ಯಗಳಿಗೆ ಒಳಗಾಗಿ ಅದರಲ್ಲೂ ಆ್ಯಸಿಡ್ ಪ್ರಕರಣಗಳಿಗೆ ಒಳಗಾಗಿ ಬದುಕುಳಿದವರ ಚಿಕಿತ್ಸೆ ಮತ್ತು ಪುನರ್ವಸತಿಗೆ ಸರ್ಕಾರ ವ್ಯವಸ್ಥೆ ಮಾಡಬೇಕು.
- ಮಹಿಳೆಯರ ಮೇಲೆ ದೌರ್ಜನ್ಯ ನಡೆಸುವ ಕೊಲೆಪಾತಕರಿಗೆ ತೀವ್ರವಾದ ಶಿಕ್ಷೆಗಳನ್ನು ವಿಧಿಸಬೇಕು.
- ಹಿಂಸೆಗೆ ಪ್ರಚೋದನೆ ನೀಡುವ 'ಉಪೇಂದ್ರ'ದಂತಹ ಚಿತ್ರಗಳಿಗೆ ಸೆನ್ಸಾರ್ ಮಂಡಳಿ ಅವಕಾಶ ನೀಡಬಾರದು.

# ಗುತ್ತಿಗೆ ಪೌರಕಾರ್ಮಿಕರ ಹೋರಾಟದಲ್ಲೊಂದು ಮೈಲಿಗಲ್ಲು

*ಕಳೆದ ಜೂನ್ ಸಂಚಿಕೆಯಲ್ಲಿ ಗುತ್ತಿಗೆ ಪೌರಕಾರ್ಮಿಕರ ಮುಂದುವರೆದ ಹೋರಾಟ ಕುರಿತು ಬರೆದಿದ್ದೇವು. ಮೇ ತಿಂಗಳ ನಂತರದ ಬೆಳವಣಿಗೆಯನ್ನು ಇಲ್ಲಿ ಪ್ರಕಟಿಸಲಾಗಿದೆ*

ಬೆಂಗಳೂರಿನ ರಾಷ್ಟ್ರೀಯ ಕಾನೂನು ಶಾಲೆಯ ವಿದ್ಯಾರ್ಥಿಗಳು ಪ್ರೊ॥ಬಾಬು ಮ್ಯಾಥ್ಯೂಸ್‌ರವರ ನೇತೃತ್ವದಲ್ಲಿ ಗುತ್ತಿಗೆ ಪೌರಕಾರ್ಮಿಕರ ಕೆಲಸದ ಪರಿಸ್ಥಿತಿ ಕುರಿತು ಅಧ್ಯಯನ ನಡೆಸಿದರು. ಬೆಂಗಳೂರು ನಗರದ ವಿವಿಧ ವಿಷಯಗಳ ಕುರಿತು ಅಧ್ಯಯನ ನಡೆಸಿ ದಿನಾಂಕ 2.6.2002 ರಂದು ರಾಷ್ಟ್ರೀಯ ಕಾನೂನು ಶಾಲೆಯಲ್ಲಿ 'ಆಧುನಿಕ ಮಹಾನಗರವಾಗಿ ಬೆಂಗಳೂರು-ಅದರ ನಾಗರಿಕ ಅವಶ್ಯಕತೆಗಳು ಮತ್ತು ಬದಲಾವಣೆಯ ಅಗತ್ಯಗಳು' ಕುರಿತಂತೆ ದುಂಡುಮೇಜಿನ ಚರ್ಚೆಯನ್ನು ಏರ್ಪಡಿಸಿದ್ದರು. ಆ ಚರ್ಚೆಯಲ್ಲಿ ಗುತ್ತಿಗೆ ಪೌರಕಾರ್ಮಿಕ ಪರಿಸ್ಥಿತಿ ಮತ್ತು ಪರಿಹಾರವೆಂಬ ವಿಷಯವೂ ಇತ್ತು. ಅಂದಿನ ಚರ್ಚೆಯಲ್ಲಿ ಮಹಾನಗರ ಪಾಲಿಕೆಯ ಹಿಂದಿನ ಇಬ್ಬರು ಆಯುಕ್ತರು, ಈಗಿನ ಆಯುಕ್ತರು, ನಾಗರೀಕ ಸಂಘಗಳು, ಪಾಲಿಕೆಯ ಚುನಾಯಿತ ಸದಸ್ಯರು, ಆಡಳಿತಗಾರರು, ಸಹಕಾರ ಕ್ಷೇತ್ರದವರು, ಕಾರ್ಮಿಕ ಸಂಘಟನೆಗಳು, ಕಾನೂನು ತಜ್ಞರು, ಮಾಧ್ಯಮದವರು ಎಲ್ಲರನ್ನು ಒಂದೆಡೆ ಸೇರಿಸಿ ಇಡೀ ದಿನ ನಡೆಸಿದ ಚರ್ಚಾಗೋಷ್ಠಿಯ ಯಶಸ್ಸು ಬಾಬು ಮ್ಯಾಥ್ಯೂಸ್ ಮತ್ತವರ ವಿದ್ಯಾರ್ಥಿಗಳಿಗೆ ಸಲ್ಲ ಬೇಕು.

ಮೊದಲ ಗೋಷ್ಠಿಯಲ್ಲಿ ಖಾಸಗೀಕರಣ, ಸದ್ಯದ ಜಾಗತೀಕರಣದ ಸಂದರ್ಭದಲ್ಲಿ ಸರ್ಕಾರದ ಪಾತ್ರ ಕುರಿತು ಎರಡನೆ ಗೋಷ್ಠಿಯಲ್ಲಿ ದಕ್ಷತೆಯ ಅಗತ್ಯ, ನಾಗರೀಕ ಆಡಳಿತದಲ್ಲಿ ಜವಾಬ್ದಾರಿ, ಪಾರದರ್ಶಕತೆ, ದಕ್ಷತೆ ತರಲು ಬೇಕಾದ ಅಗತ್ಯಗಳ ಕುರಿತು, ಮೂರನೇ ಗೋಷ್ಠಿಯಲ್ಲಿ ಗುತ್ತಿಗೆ ವ್ಯವಸ್ಥೆಯಲ್ಲಿನ ದಲಿತ ಮಹಿಳೆ, ಕಾನೂನಿನ ಪರಿಣಾಮ ಕುರಿತು ಹಾಗು ನಾಲ್ಕನೆ ಗೋಷ್ಠಿಯಲ್ಲಿ ಉತ್ತಮ ಬದಲಾವಣೆಯಲ್ಲಿ ನಗರಾಡಳಿತದ ಪಾತ್ರ, ಬೆಂ.ಮ.ಪಾ ,ಬೆಂಗಳೂರು ಕಾರ್ಯಪಡೆ, ನಾಗರೀಕ ಸಮಾಜ ಮತ್ತು ಕಾರ್ಮಿಕ ಸಂಘಟನೆಗಳು - ಇವು ಒಂದಕ್ಕೊಂದು ವ್ಯತಿರಿಕ್ತವಾಗದೆ ಪರಸ್ಪರ ಪೂರಕ ವಾಗಿರಲು ಸಾಧ್ಯವಿಲ್ಲವೆ? ಎಂಬುದರ ಕುರಿತು ಚರ್ಚಿಸಲಾಯಿತು. ಮಾಮೂಲಿನಂತೆ ಸರ್ಕಾರದ ಪ್ರತಿನಿಧಿಗಳು (ಪಾಲಿಕೆಯ ಮಾಜಿ ಆಯುಕ್ತರುಗಳಾದ ಅಶೋಕದಳವಾಯಿ, ಜೈರಾಜ್ ರವರು) ದಕ್ಷತೆತರಲು ಖಾಸಗೀಕರಣ ಸೂಕ್ತವೆಂದು, ನಗರ ಪಾಲಿಕೆ ಕೆಲಸವನ್ನು ಆದಷ್ಟು ವೃತಿಪರ ಗುತ್ತಿಗೆದಾರರಿಗೆ (ಅಂದರೆ Global tender) ನೀಡ ಬೇಕೆಂದು ಹೇಳಿದರು. ಕಣ್ಣೆದುರು ಅತ್ಯಲ್ಪ ಕೂಲಿಗೆ ಅತ್ಯಧಿಕ ದುಡಿಮೆ ಮಾಡುವ ಕಾರ್ಮಿಕರಿಗಿಂತ ಕ್ಹಾಣದೂರಿನ ವಿದೇಶಿ ಗುತ್ತಿಗೆದಾರರ ದಕ್ಷತೆಯನ್ನು ಸರ್ಕಾರ ಸಲೀಸಾಗಿ ನಂಬುತ್ತದೆ ! ದಕ್ಷತೆ ಎಂದರೆ ಕಂಪ್ಯೂಟರ್‌ಗಳು, ಬಹುರಾಷ್ಟ್ರೀಯ ಕಂಪೆನಿಗಳು ! ಬೆಂಗಳೂರು ಕಾರ್ಯಪಡೆಯ ಕಲ್ಪನಕಾರ್ ಮಹಾನಗರವಾಗುತ್ತಿರುವ ಬೆಂಗಳೂರಿನ ಸ್ವಚ್ಛತೆಯ ಕುರಿತು ಮಾತನಾಡಿದರು. ಖಾಸಗೀ ಮತ್ತು ಸರ್ಕಾರದ ಜಂಟಿ ಪ್ರಯತ್ನದಲ್ಲಿ 'ಸ್ವಚ್ಛ ಬೆಂಗಳೂರು ' ಕಾರ್ಯಕ್ರಮ ಜಾರಿಗೊಂಡು ಆಗಿರುವ ಕೆಲಸಗಳ ಕುರಿತು ಹೇಳಿದರು. ಸ್ವಚ್ಛ ಸಾರ್ವಜನಿಕ ಶೌಚಾಲಯಗಳ ಬಗ್ಗೆ ಮಾತನಾಡುವ ಬೆಂಗಳೂರು ಕಾರ್ಯಪಡೆಯವರ ಕಾರ್ಪೊರೇಟ್ ಕಣ್ಣಿಗೆ ಕನಿಷ್ಟ ಕೂಲಿಯೂ ಇಲ್ಲದೆ ಬೆನ್ನು ಮುರಿಯುವ ನಗರ ಸ್ವಚ್ಛತೆಯ ಕೆಲಸ ಮಾಡುತ್ತಿರುವ ಕಾರ್ಮಿಕರು ಕಣ್ಣಿಗೆ ಬೀಳದಿರುವುದು ಆಶ್ಚರ್ಯವೇನಲ್ಲ. ಪಾರದರ್ಶಕತೆ, ಜವಾಬ್ದಾರಿ ಕುರಿತು ಮಾತನಾಡಿದ ಎಕನಾಮಿಕ್ ಟೈಂಸ್‌ನ ನರೇಂದ್ರ ಪಾಣಿಯವರು ಉಪಯುಕ್ತ ಮಾಹಿತಿ ನೀಡಿದರು. ಬೆಂಗಳೂರೇಕೆ ಬೇರೆ ನಗರವಾಗದೆ ಸಿಂಗಪೂರವೇ ಆಗಲು ಹೊರಟಿದೆ, ಸ್ವಚ್ಛ ಬೆಂಗಳೂರು ಮಾಡಲು ಇನ್‌ಫೋಸಿಸ್ ಯಾಕೆ ಆಸಕ್ತಿ ತೋರಿ ಸುತ್ತಿದೆ ಎಂಬುದರ ಹಿಂದೆ, ಸಿಂಗಪುರದ ಕಂಪೆನಿಯೊಂದು ಇನ್‌ಫೋಸಿಸ್‌ನಲ್ಲಿ ಹೂಡಿರುವ 1500 ಕೋಟಿ ಬಂಡವಾಳ ಕಾರಣವೆಂಬ ಸತ್ಯವನ್ನು ತಿಳಿಸಿದರು. ಗುತ್ತಿಗೆ ವ್ಯವಸ್ಥೆಯ ಮಿತಿಗಳನ್ನು ಕುರಿತು ವಕೀಲರಾದ ಎಸ್.ಎನ್.ಮೂರ್ತಿಯವರು, ಕಾನೂನಿನ ಸಾಧ್ಯತೆಗಳು ಮತ್ತು ಮಿತಿಗಳು ಕುರಿತಂತೆ ವಕೀಲರಾದ ಎಂ.ಸಿ.ನರಸಿಂಹನ್ ರವರು ಮಾತನಾಡಿದರು. ಗುತ್ತಿಗೆ ಪೌರಕಾರ್ಮಿಕರ ಕಾಳಜಿಗಳನ್ನು ಕುರಿತು ಬಾಲಕೃಷ್ಣನ್ ರವರು, ಮಹಿಳಾ ಗುತ್ತಿಗೆ ಪೌರಕಾರ್ಮಿಕರ ಕುರಿತು ಸರಸ್ವತಿ ಮಾತನಾಡಿದರು, ಪರ್ಯಾಯಗಳನ್ನು ಕುರಿತಂತೆ ಇಂದಿರಾನಗರದ ನಾಗರೀಕ ಸಂಸ್ಥೆ RISE (Residents initiative for safe. environment) ನ ಪಿ.ಕೆ. ವೆಂಕಟರಾಮನ್‌ರವರು, ಮತ್ತು ಹೈದ್ರಾಬಾದಿನ ಸಹಕಾರ ಚಳುವಳಿಯಲ್ಲಿ ಸಕ್ರೀಯವಾಗಿರುವ

ಶಶಿರಾಜಗೋಪಾಲ್ ರವರು ಮಾತನಾಡಿದರು. ನಾಗರೀಕರ ಪಾಲ್ಗೊಳ್ಳುವಿಕೆ ಮತ್ತು ಕಾರ್ಮಿಕರ ಸಹಕಾರ ಸಂಘಗಳು ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿರುವುದನ್ನು ಕುರಿತು ಅವರಿಬ್ಬರು ಮಾತನಾಡಿದ್ದು ಹೊಸ ಭರವಸೆಯಾಗಬಲ್ಲದು.

ರಾಜಾಜಿನಗರದ ಕೈಗಾರಿಕಾ ಪ್ರದೇಶದಲ್ಲಿರುವ 21 A ವಾರ್ಡಿನ ಕಾರ್ಮಿಕರ ಪರಿಸ್ಥಿತಿಯಲ್ಲಿ ಏನೂ ಬದಲಾವಣೆಗಳಾಗಿಲ್ಲ. ಸಂಬಳ ಸಿಗದೆ 4 ತಿಂಗಳಾದರೂ ಆ ಕಾರ್ಮಿಕರ ಹೋರಾಟದ ಸ್ಪೂರ್ತಿ ಕಡಿಮೆಯಾಗಿಲ್ಲ ಸಂಘದವರು ಎಡ ಬಿಡದೆ ಕಾರ್ಮಿಕ ಆಯುಕ್ತರ, ಪಾಲಿಕೆ ಅಧಿಕಾರಿಗಳು, ಚುನಾಯಿತ ಪ್ರತಿನಿಧಿಗಳಿಗೂ ಪಾಲು ನೀಡುವುದರಿಂದ ಬದಲಾವಣೆ ಸಾಧ್ಯವಾಗುವುದಿಲ್ಲ. ಖೂಳ ಗುತ್ತಿಗೆದಾರರು ಬದಲಾಗದ ಹೊರತು ಯಾವ ಬದಲಾವಣೆಯನ್ನು ತರಲು ಸಾಧ್ಯವಿಲ್ಲವೆಂಬುದು ಪಾಲಿಕೆಯ ಆಯುಕ್ತರಿಗೆ ಮನವರಿಕೆಯಾದುದು ಕಾರ್ಮಿಕರ ಅದೃಷ್ಟವೆನ್ನಬೇಕೇನೊ!

ಪಾಲಿಕೆಯ ಮಾಸಿಕ ಸಭೆಯಲ್ಲಿ ಹಲವು ವಿಷಯಗಳ ಕುರಿತು ಪಾಲಿಕೆಯ ಅಧಿಕಾರಿಗಳೂ, ಚುನಾಯಿತ ಪ್ರತಿನಿಧಿಗಳು ಚರ್ಚಿಸುತ್ತಾರೆ. ಗುತ್ತಿಗೆ ಪೌರ ಕಾರ್ಮಿಕರ ಕುರಿತು ದಿನಾಂಕ 9.8.2002 ರ ಮಾಸಿಕ ಸಭೆಯಲ್ಲಿ ಚರ್ಚೆ ನಡೆಯಲಿದೆ ಎಂದು ತಿಳಿದ ಸಂಘದವರು ಅದೇ ದಿನ ಪಾಲಿಕೆಯ ಆವರಣದಲ್ಲಿ ಪ್ರತಿಭಟನೆ ನಡೆಸಿದರು. ಬೀಳುತ್ತಿದ್ದ ಮಳೆಯನ್ನು ಲೆಕ್ಕಿಸದೆ ಕೂತ ಕಾರ್ಮಿಕರಿಗೆ ಬೆಂಬಲ ಸೂಚಿಸಲು CITU ಕಾರ್ಮಿಕ ಸಂಘಟನೆಯ ಬಾಲಕೃಷ್ಣ, ಸಾಹಿತಿ ಜಿ.ಕೆ. ಗೋವಿಂದರಾವ್, ಪತ್ರಕರ್ತೆ ಡಾ|| ವಿಜಯಾ ಹಾಗು ಚಲನಚಿತ್ರ ನಿರ್ದೇಶಕರಾದ ಗಿರೀಶ್ ಕಾಸರವಳ್ಳಿಯವರು ಬಂದಿದ್ದರು. ಹಾಡು ಹೇಳುತ್ತ, ಘೋಷಣೆ ಕೂಗುತ್ತ ಪಟ್ಟು ಬಿಡದೆ ಕೂತಿದ್ದ ಕಾರ್ಮಿಕರನ್ನು ಬೇಟಿಮಾಡಲು ಪಾಲಿಕೆಯ ಪ್ರತಿನಿಧಿಯೊಬ್ಬರು ಹೊರ ಬಂದರು. ಕಾರ್ಮಿಕರನ್ನು ಉದ್ದೇಶಿಸಿ ಅವರು "ಈಗ ನಾಯಿಗಳ ಬಗ್ಗೆ ಚರ್ಚೆಯಾಗುತ್ತಿದೆ (ಬೀದಿನಾಯಿಗಳನ್ನು ಕೊಲ್ಲಬಾರದೆಂದು ಪ್ರಾಣಿದಯಾ ಸಂಘದವರು ಆ ದಿನ ಧರಣಿಕೂತಿದ್ದರು) ನಿಮ್ಮ ವಿಷಯ ಬರುವ ವೇಳೆಗೆ ರಾತ್ರಿಯಾಗಬಹುದು, ನಿಮ್ಮ ಮನವಿ ಪತ್ರ ಕೊಡಿ, ಚರ್ಚೆಯಾದ ವಿಷಯವನ್ನು ಸಂಘದ ಪದಾಧಿಕಾರಿಗಳಿಗೆ ತಿಳಿಸುತ್ತೇವೆ" ಎಂದು ಹೇಳಿದರು. ಮರುದಿನ ಪತ್ರಿಕೆಗಳಲ್ಲಿ ಬೀದಿನಾಯಿಗಳನ್ನು ಕೊಲ್ಲಬೇಕೆಂಬುದರ ಬಗ್ಗೆ ಚರ್ಚೆಯಾದದ್ದು ವರದಿಯಾಗಿತ್ತು. ಬಡ ಕಾರ್ಮಿಕರ ವಿಷಯವನ್ನು ಮುಂದಿನ ಸಭೆಗೆ ಮುಂದೂಡಲಾಗಿತ್ತು. ದಿನಾಂಕ 31.8.02 ರ ಸಭೆಯಲ್ಲಿ ಚರ್ಚಿಸಲಾಗುವುದೆಂದು ತಿಳಿಸಲಾಯಿತು. ಡೆಟ್ರಾಯಿಟ್‌ನಲ್ಲಿ ನಡೆಯಲಿರುವ ವಿಶ್ವ ಕನ್ನಡ ಸಮ್ಮೇಳನದಲ್ಲಿ ಭಾಗವಹಿಸಲು

**ರಾಷ್ಟ್ರೀಯ ಕಾನೂನು ಶಾಲೆಯು ಸಮಾಜದಲ್ಲಿನ ವಿದ್ಯಾಮಾನಗಳನ್ನು, ಬೆಳವಣಿಗೆಗಳನ್ನು ಅರ್ಥಮಾಡಿಕೊಳ್ಳಲು ಪ್ರಸ್ತುತ ಜೀವನದ ವಿವಿಧ ವಿಷಯಗಳನ್ನು ಕುರಿತು ದುಂಡು ಮೇಜಿನ ಚರ್ಚೆಯನ್ನು ನಡೆಸುತ್ತದೆ. ಇದು ಅವರ ಅಕೆಡಮಿಕ್ ಯೋಜನೆಯ ಭಾಗವಾಗಿದ್ದು ಅದರ ಉದ್ದೇಶ ಅಕೆಡೆಮಿಕ್ ಕ್ಷೇತ್ರದವರು, ಯೋಜನೆ ರೂಪಿಸುವವರು, ಆಡಳಿತಗಾರರು, ನಾಗರೀಕಸಮಾಜ, ಮತ್ತು ಉಳಿದೆಲ್ಲ ಸಂಬಂಧಪಟ್ಟವರ ನಡುವೆ ಸಂವಾದನಡೆಸಿ ಆ ಮೂಲಕ ಸಾಮಾಜಿಕವಾಗಿ ಉಪಯುಕ್ತವಾದ ಬದಲಾವಣೆ ತರುವುದಾಗಿದೆ.**

ಆಯುಕ್ತರ ಬಳಿ ಎಡತಾಕುತ್ತಲೇ ಇದ್ದಾರೆ. ಸಂಘದವರ ನಿರಂತರ ಪ್ರಯತ್ನದಿಂದಾಗಿ ಕಾರ್ಮಿಕ ಇಲಾಖೆಯ ಉಪ-ಆಯುಕ್ತರು 2-3 ಬಾರಿ ವಾರ್ಡಿಗೆ ಭೇಟಿಕೊಟ್ಟು ಪರಿಶೀಲಿಸಿ ಪಾಲಿಕೆಯ ಆಯುಕ್ತರಿಗೆ ನೋಟಿಸು ಜಾರಿ ಮಾಡಿದ್ದಾರೆ. "ಕಾರ್ಮಿಕರಿಗೆ ವೇತನ ನೀಡಿಲ್ಲದಿರುವುದು 1936 ವೇತನ ಕಾಯ್ದೆಯ ಸ್ಪಷ್ಟ ಉಲ್ಲಂಘನೆಯಾಗಿದೆ. ಗುತ್ತಿಗೆ ಕಾಯ್ದೆಯಡಿ ಬೆಂ.ಮಹಾ.ಪಾ. ನೋಂದಣಿ ಮಾಡಿಸಿಕೊಳ್ಳದೇ ಇರುವ ಪ್ರಯುಕ್ತ ಈ ಕಾರ್ಮಿಕರು ಗುತ್ತಿಗೆ ಕಾರ್ಮಿಕರೆಂದು ಎನಿಸಿಕೊಳ್ಳದೆ ಬೆಂ.ಮ.ಪಾ. ನೇಮಿಸಿಕೊಂಡಿರುವ ನೇರ ಕಾರ್ಮಿಕರೆಂದು ಪರಿಗಣಿಸಲಾಗುವುದು. ಗುತ್ತಿಗೆ ದಾರರ ಮೂಲಕ ಕೆಲಸ ನಿರ್ವಹಿಸಿಕೊಂಡಿದ್ದರೂ ಕೂಡ ಅವರು ದುಡಿಸಿಕೊಳ್ಳುವ ಕಾರ್ಮಿಕರು. ಆದ್ದರಿಂದ ಸದರಿ ನೌಕರರಿಗೆ ಪ್ರತಿ ಮಾಹೆ ರೂ 1550/- ರಂತೆ ವೇತನ ಪಾವತಿ ಮಾಡಿ ಏಳುದಿನಗಳೊಳಗಾಗಿ ವರದಿ ಸಲ್ಲಿಸತಕ್ಕದ್ದು. ಈ ಆದೇಶವನ್ನು ಉಲ್ಲಂಘಿಸಿದಲ್ಲಿ ವೇತನಕಾಯ್ದೆ 1936 ರ ಕಲಂ 5(1)(ಬಿ) ಅನ್ವಯ ನಿಮ್ಮ ವಿರುದ್ಧ ಕ್ರಮ ಜರುಗಿಸಲು ಸಕ್ಷಮ ಪ್ರಾಧಿಕಾರದ ಮುಂದೆ ದಾವೆ ಹೂಡಲಾಗುವುದು" ಎಂದು ನೋಟಿಸಿನಲ್ಲಿ ತಿಳಿಸಿದ್ದರು.

ಕಾರ್ಮಿಕ ಇಲಾಖೆಯಿಂದ ನೋಟಿಸು ಜಾರಿಯಾದರೂ ಏನು ಬೆಳವಣಿಗೆಗಳಾಗಲಿಲ್ಲ. ಬಡವರ ದುಡಿಮೆ ದೋಚಿ ಲಾಭ ಮಾಡುವ ಗುತ್ತಿಗೆದಾರರು ತಮ್ಮ ಲಾಭದಲ್ಲಿ ಪಾಲಿಕೆ

ಮುಖ್ಯ ಮಂತ್ರಿಗಳೊಂದಿಗೆ ಪಾಲಿಕೆಯ ಮೇಯರ್ ಮತ್ತು ಚುನಾಯಿತ ಸದಸ್ಯರುಗಳು ಹೋಗುತ್ತಿದ್ದಾರೆಂದು, ಪಾಲಿಕೆಯ ಸದಸ್ಯರುಗಳು ಅಲ್ಲಿನ ಹೈಟೆಕ್ ಸ್ವಚ್ಛತೆ ಕುರಿತು ಅಧ್ಯಯನವನ್ನೂ ಮಾಡಲಿರುವುದರಿಂದ 31.8.02 ರಂದು ನಡೆಯಲಿರುವ ಸಭೆ ರದ್ದಾಗಿದೆ ಎಂದು ತಿಳಿಯಿತು. ಹಾಗಾಗಿ ಸಂಘದವರು ದಿನಾಂಕ 23.08.02 ರಂದು ಪತ್ರಿಕಾಗೋಷ್ಠಿ ಕರೆದರು. ಯೋಜನಾ ಆಯೋಗದ ಮುಖ್ಯಸ್ಥರಾಗಿದ್ದ ಎಲ್.ಸಿ.ಜೈನ್ ರವರು ಪತ್ರಿಕಾಗೋಷ್ಠಿಯಲ್ಲಿ ಮಾತನಾಡಿದರು.

ಕಾರ್ಮಿಕರ ಒತ್ತಡಕ್ಕೆ ಮಣಿದ ಪಾಲಿಕೆಯವರು ರದ್ದು ಪಡಿಸಲಾದ ಸಭೆಯನ್ನು ಅಮೆರಿಕ ಪ್ರವಾಸಕ್ಕೆ ಮೊದಲೇ ದಿನಾಂಕ 24.08.02 ರಂದೆ ಮಾಡಲು ನಿರ್ಧರಿಸಿದರು. ವಿಷಯ ತಿಳಿದ ಸಂಘದವರು 24ರಂದು ಮತ್ತೆ ಪ್ರತಿಭಟನಾ ಕಾರ್ಯಕ್ರಮ ನಡೆಸಿದರು. ಆ ದಿನದ ಪಾಲಿಕೆಯ ಸಭೆಯಲ್ಲಿ, 1.4.02 ರಿಂದ ಮುಂದಿನ 19 ತಿಂಗಳ ವರೆಗೆ ಹಳೆಯ ಗುತ್ತಿಗೆದಾರರಿಗೆ ಗುತ್ತಿಗೆಯನ್ನು ಮುಂದುವರೆಸ ಬೇಕೆಂದು ಹಿಂದೆ ಕೈಗೊಂಡಿದ್ದ ನಿರ್ಧಾರವನ್ನು ಕೈಬಿಟ್ಟು ಹೊಸ ಟೆಂಡರ್

## ಪತ್ರಿಕಾ ಪ್ರಕಟಣೆ

**ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಮಹಾಪೌರರು ಮತ್ತು ಮಹಾನಗರ ಪಾಲಿಕೆಯ ಸದಸ್ಯರು ಪೋಷಿಸುತ್ತಿರುವ ಜೀತ ಪದ್ಧತಿಯನ್ನು ಕೊನೆಗಾಣಿಸಲು.**

***

ಕಳೆದು ಹತ್ತು ವರ್ಷಗಳಿಂದ ಬೆಂಗಳೂರು ಮಹಾನಗರ ಪಾಲಿಕೆ ಕಸ ಗುಡಿಸಲು ಮತ್ತು ಕಸ ತೆಗೆಯಲು ಸುಮಾರು 7,000 ಪೌರ ಕಾರ್ಮಿಕರನ್ನು ನೇಮಕ ಮಾಡಿಕೊಂಡಿದೆ. ಅವರಲ್ಲಿ ಶೆ. 80ರಷ್ಟು ದಲಿತ ಮಹಿಳೆಯರು ಈ ಎಲ್ಲಾ ಕೆಲಸಗಾರರನ್ನು ಈವರೆಗೆ ಬಂದು ಹೋದ ಮಹಾ ಪೌರರು ಮತ್ತು ನಗರ ಪಾಲಿಕಾ ಸದಸ್ಯರು ಉನ್ನತ ಮಟ್ಟದ ನೌಕರ ಶಾಹಿ ಜೊತೆ ಶಾಮೀಲಾಗಿ ಜೀತದಾಳುಗಳಂತೆ ನಡೆಸಿಕೊಳ್ಳುತ್ತಿದ್ದಾರೆ.

ಈ ಕಾರ್ಮಿಕರಿಗೆ ರೂ.2,250/- ವೇತನದ ಜೊತೆಗೆ ರಜೆ ಸೌಲಭ್ಯ, ವಿಮೆ, ಭವಿಷ್ಯ ನಿಧಿ, ಸುರಕ್ಷಾ ವ್ಯವಸ್ಥೆ, ಕುಡಿಯುವ ನೀರು, ಶೌಚಾಲಯ ಇತ್ಯಾದಿ ಸೌಲಭ್ಯಗಳನ್ನು ಪಡೆಯಲು ಅರ್ಹರಾಗಿದ್ದರೂ ಇವೆಲ್ಲವುಗಳಿಂದ ವಂಚಿತರಾಗಿದ್ದಾರೆ. ಇದೇ ಪಾಲಿಕೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ಖಾಯಂ ನೌಕರರು 5ನೇ ವೇತನ ಆಯೋಗದನ್ವಯ 5 ರಿಂದ 6 ಸಾವಿರ ರೂ.ಗಳ ವೇತನ ಮತ್ತು ಮೇಲಿನ ಎಲ್ಲ ಸೌಲಭ್ಯಗಳನ್ನು ಪಡೆಯುತ್ತಿದ್ದಾರೆ.

ಪಾಲಿಕೆಯ ಸದಸ್ಯರು, ಉನ್ನತ ಅಧಿಕಾರಿಗಳು ಮತ್ತು ರಾಜಕಾರಣಿಗಳ ಒಂದು ಗುಂಪು ಬೇನಾಮಿ ಹೆಸರಿನಲ್ಲಿ ಗುತ್ತಿಗೆ ನಿರ್ವಹಿಸುತ್ತಿದ್ದು ಪ್ರತಿ ವರ್ಷ 10 ಕೋಟಿ ರೂ.ಗಳನ್ನು ಲಾಭ ಮಾಡುತ್ತಿದ್ದಾರೆ. ಇದೆಲ್ಲಕ್ಕಿಂತ ಹೆಚ್ಚಾಗಿ ಈ ಕಾರ್ಮಿಕರನ್ನು ಜೀತದಾಳುಗಳಂತೆ ನಡೆಸಿಕೊಳ್ಳುತ್ತಿದ್ದು, ಜೀತ ಪದ್ಧತಿಯನ್ನು ಪೋಷಿಸುತ್ತಿದ್ದಾರೆ.

ಈ ಗುತ್ತಿಗೆದಾರರು ಪಾಲಿಕೆಯಿಂದ ಪ್ರತಿ ಕೆಲಸಗಾರರಿಗೆ ರೂ.2000/- ವೇತನ ಮತ್ತು ಇತರೆ ಭತ್ಯೆಗಳ ಹಣವನ್ನು ಪಡೆಯುತ್ತಿದ್ದು, ಮಹಿಳಾ ಪೌರ ಕಾರ್ಮಿಕರಿಗೆ ರೂ. 900/- ಮತ್ತು ಪುರುಷರಿಗೆ ರೂ. 1,000/- ಮಾತ್ರ ನೀಡಲಾಗುತ್ತದೆ. ಈ ಎಲ್ಲಾ ಅನ್ಯಾಯಗಳಿಗೆ ಶ್ರೀ ಎಸ್.ಎಂ.ಕೃಷ್ಣರವರ ಸಂಪುಟದಲ್ಲಿ ಹೊಸದಾಗಲಿ ಸೇರ್ಪಡೆಯಾಗಿರುವ ಸಚಿವರು ಬೆಂಬಲವಾಗಿ ನಿಂತಿದ್ದಾರೆ.

ಈ ಹಿಂದೆ ಪಾಲಿಕೆ ಆಯುಕ್ತರು ಈ ಸಮಾಜ ವಿರೋಧಿ ಮತ್ತು ಕಾನೂನು ಬಾಹಿರ ಗುತ್ತಿಗೆದಾರರು ಕಾನೂನುಗಳನ್ನು ಉಲ್ಲಂಘಿಸಿದ್ದರಿಂದ ಇವರಿಗೆ ನೀಡಿದ್ದ ಪರವಾನಿಗೆಗಳನ್ನು ರದ್ದು ಪಡಿಸಿದ್ದರು. ಪಾಲಿಕೆಯು ಕೂಡ ಈ ನೌಕರರನ್ನು ಕೆಲಸಕ್ಕೆ ನೇಮಿಸಿಕೊಳ್ಳಲು ಗುತ್ತಿಗೆ ಕಾರ್ಮಿಕರ (ನಿಯಂತ್ರಣ ಮತ್ತು ನಿಷೇಧ) ಕಾಯ್ದೆ 1970ರ ಅಡಿಯಲ್ಲಿ ಅನುಮತಿ ಪಡೆದಿಲ್ಲ. ಹೀಗಾಗಿ ಕೋಟ್ಯಾಂತರ ರೂ.ಗಳು ಸರಿಯಾದ ಲೆಕ್ಕವಿಲ್ಲದೆ ವ್ಯಯವಾಗುತ್ತಿದೆ.

ನಮ್ಮ ಕಾರ್ಮಿಕ ಸಂಘಟನೆಯು ಭ್ರಷ್ಟಾಚಾರವನ್ನು ತೊಡೆದುಹಾಕಿ ಎಲ್ಲ ಕಾರ್ಮಿಕರಿಗೆ ನ್ಯಾಯ ದೊರಕಿಸಿಕೊಡಲು ಹೋರಾಟ ನಡೆಸುತ್ತಿದೆ. ಆದರೆ ಮಹಾಪೌರರ, ಪಾಲಿಕೆ ಸದಸ್ಯರು, ಗುತ್ತಿಗೆದಾರರ ಜೊತೆ ಶಾಮೀಲಾಗಿ ಕಾರ್ಮಿಕರಿಗೆ ಕಿರುಕುಳ ನೀಡುತ್ತಿದ್ದು ಕಾರ್ಮಿಕ ಸಂಘಟನೆಯನ್ನು ತೊರೆಯುವಂತೆ ಒತ್ತಾಯಿಸುತ್ತಿದ್ದಾರೆ. ನೂರಾರು ಕಾರ್ಮಿಕರನ್ನು ಸಂಘಟನೆಯಲ್ಲಿ ಪಾಲ್ಗೊಂಡಿದ್ದಕ್ಕಾಗಿ ಕೆಲಸದಿಂದ ತೆಗೆದು ಹಾಕಲಾಗಿದೆ.

ರಾಜಾಜಿನಗರದ ಕೈಗಾರಿಕಾ ಪ್ರದೇಶದಲ್ಲಿನ 21ನೇ ಎ ವಾರ್ಡಿನಲ್ಲಿ ಕೆಲಸ ನಿರ್ವಹಿಸುತ್ತಿರುವ ಕಾರ್ಮಿಕರಿಗೆ ಕಳೆದ ಮೂರು ತಿಂಗಳಿಂದ ತುತ್ತು ಅನ್ನಕ್ಕಾಗಿ ಸಿಗುತ್ತಿದ್ದ ರೂ.900/- ನ್ನು ಕೂಡ ನೀಡಿರುವುದಿಲ್ಲ. ಈ ಕಾರ್ಮಿಕರಿಗೆ ರಜೆಯನ್ನು ನಿರಾಕರಿಸಲಾಗಿದೆ. ನಮ್ಮ ಕಾರ್ಮಿಕರಲ್ಲಿ ಒಬ್ಬರಾದ ಅಂಜನೇಯಲು ಈ ಹೋರಾಟಕ್ಕೆ ನಾಯಕತ್ವ ನೀಡುತ್ತಿದ್ದಾರೆ.

ಮಲ ಹೊರುವ ಪದ್ಧತಿ ಎಂದೋ ನಿಷೇದಿಸಲ್ಪಟ್ಟಿದ್ದರೂ ಬೆಂಗಳೂರಿನಂತಹ ಹೈಟೆಕ್ ನಗರದಲ್ಲಿ ಇಂದಿಗೂ ಈ ಪದ್ಧತಿ ಜಾರಿಯಲ್ಲಿರುವುದು ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಮಲ ಹೊರುವ ಪದ್ಧತಿ ನಿಷೇದ ಕಾಯ್ದೆಯಡಿ ಮಹಾಪೌರರನ್ನು, ಆಯುಕ್ತರನ್ನು 2 ವರ್ಷ ಜೈಲು ಶಿಕ್ಷೆಗೊಳಪಡಿಸಬಹುದು. ಈ ಹೀನಾಯ ಪದ್ಧತಿಯ ಬಗ್ಗೆ, ಬಡಕಾರ್ಮಿಕರ ಬದುಕಿನ ಬಗ್ಗೆ ಕೊಂಚ ತಲೆಕೆಡಿಸಿಕೊಳ್ಳದೆ ಘನ ಕಾಂಗ್ರೆಸ್ ಸರ್ಕಾರದ ಹೈಟೆಕ್ ಮುಖ್ಯಮಂತ್ರಿಗಳು ಹಾಗೂ ಪಾಲಿಕೆಯ ಚುನಾಯಿತ ಪ್ರತಿನಿಧಿಗಳು ವಿಶ್ವ ಕನ್ನಡ ಸಮಾವೇಶದಲ್ಲಿ ಪಾಲ್ಗೊಳ್ಳಲು ಅಮೆರಿಕಾ ಯಾತ್ರೆ ಕೈಗೊಂಡಿದ್ದಾರೆ. ಪಾಲಿಕೆಯ ಪ್ರತಿನಿಧಿಗಳು ಅಲ್ಲಿ ಹೈಟೆಕ್ ಸ್ವಚ್ಛತೆಯ ಬಗ್ಗೆ ಅಧ್ಯಯನ ಮಾಡಲಿದ್ದಾರಂತೆ.

ಈ ಮೂಲಕ ಮಾಧ್ಯಮ ಮತ್ತು ಮಹಾನಗರದ ಪ್ರಜ್ಞಾವಂತ ನಾಗರೀಕರು ಈ ಹೋರಾಟಕ್ಕೆ ಎಲ್ಲಾ ರೀತಿಯ ನೈತಿಕ ಮತ್ತು ಆರ್ಥಿಕ ಬೆಂಬಲ ನೀಡಬೇಕೆಂದು ನಾವು ವಿನಂತಿಸುತ್ತೇವೆ. ಜಗತ್ತಿನಲ್ಲೇ ಹೆಸರು ಮಾಡಿರುವ ಈ ಮಹಾನಗರದಲ್ಲಿ ಜೀತ ಪದ್ಧತಿಯನ್ನು ತೊಡೆದುಹಾಕಲು ಎಲ್ಲರೂ ಈ ಹೋರಾಟದಲ್ಲಿ ಪಾಲ್ಗೊಳ್ಳಬೇಕಾಗಿ ವಿನಂತಿ.

ಕರೆಯುವ ನಿರ್ಣಯವನ್ನು ತೆಗೆದು ಕೊಳ್ಳಲಾಯಿತು. ಬಡ ಕಾರ್ಮಿಕರ ನಿರಂತರ ಹೋರಾಟದಿಂದಾಗಿ ಹೊಸ ಟೆಂಡರಿನಲ್ಲಿ ಗುತ್ತಿಗೆಯ ಷರತ್ತು ಮತ್ತು ನಿಬಂಧನೆಗಳಡಿಯಲ್ಲಿ ಕಾರ್ಮಿಕರ ಪರವಾದ ಕೆಲವು ನಿಯಮಗಳನ್ನು ಸೇರಿಸಲಾಗಿದೆ. ಕೆಲವು ನಿಯಮಗಳು ಕೆಳಕಂಡಂತಿವೆ.

**ಕಲಂ - 6**

ಕೆಲಸಗಾರರಿಗೆ ವೈದ್ಯಕೀಯ ನೆರವು ಒದಗಿಸಲು ಗುತ್ತಿಗೆದಾರನು ಪಾವತಿ ಮಾಡಬೇಕಾದ ಖರ್ಚುವೆಚ್ಚಗಳು.

ಅಪಘಾತದ ಪರಿಣಾಮವಾಗಿ ಯಾವುದೇ ಕೆಲಸಗಾರನ/ ಕೆಲಸಗಾರಳ ದೇಹಕ್ಕೆ ಪೆಟ್ಟು ಉಂಟಾದಲ್ಲಿ ಆತನಿಗೆ ವೈದ್ಯಕೀಯ ನೆರವು ಒದಗಿಸಲು ಗುತ್ತಿಗೆದಾರನು ಜವಾಬ್ದಾರನಾಗುತ್ತಾನೆ ಮತ್ತು ಅದರ ಖರ್ಚು ವೆಚ್ಚವನ್ನು ಆತನೇ ಪಾವತಿ ಮಾಡಬೇಕಾಗುತ್ತದೆ.

**ಕಲಂ-7**

ಕಾರ್ಮಿಕರ ಪರಿಹಾರ ಅದಿನಿಯಮದ ಅನ್ವಯ ಗುತ್ತಿಗೆ ದಾರನು ಪಾವತಿ ಮಾಡಬೇಕಾದ ಪರಿಹಾರ

ಕೆಲಸ ಮಾಡುತ್ತಿರುವಾಗ ಕೆಲಸಗಾರರಿಗೆ ಪೆಟ್ಟುಗಳು ಉಂಟಾದ ಪಕ್ಷದಲ್ಲಿ 1923ರ ಕಾರ್ಮಿಕರ ಪರಿಹಾರ ಅಧಿನಿಯಮದ ಅನ್ವಯ, ಆ ಘಟನೆಗೆ ಗುತ್ತಿಗೆದಾರನು ಜವಾಬ್ದಾರನಾಗಿರುತ್ತಾನೆ. ಮತ್ತು ಅದಕ್ಕಾಗಿ ತನ್ನ ಸ್ವಂತ ಕಾರ್ಮಿಕರಿಗೆ ಪಾವತಿ ಮಾಡಬೇಕಾದ ಯಾವುದೇ ಪರಿಹಾರವನ್ನು ಆತನು ಪಾವತಿ ಮಾಡಬೇಕಾಗುತ್ತದೆ.

**ಕಲಂ-8**

ಸುರಕ್ಷಣಾ ಸಲಕರಣೆಗಳು, ಪ್ರಥಮ ಚಿಕಿತ್ಸೆ ಸಲಕರಣೆಗಳು ಚಿಕಿತ್ಸೆ ಇತ್ಯಾದಿಯನ್ನು ಗುತ್ತಿಗೆದಾರನು ಒದಗಿಸಬೇಕು.

**ಕಲಂ - 9**

❖ ಗುತ್ತಿಗೆದಾರನು ಕೆಲಸಕ್ಕಾಗಿ ನೇಮಕ ಮಾಡಿಕೊಳ್ಳುವ ವ್ಯಕ್ತಿಗಳಿಗೆ ಕನಿಷ್ಟ ವಯಸ್ಸು 18 ಹಾಗು 55 ವರ್ಷದಾಟಿರಬಾರದು.

❖ ಗುತ್ತಿಗೆದಾರನು ಕೆಲಸಗಾರರಿಗೆ ಶುದ್ಧವಾದ ಅಥವ ಕುಡಿಯಲು ಯೋಗ್ಯವಾದ ನೀರನ್ನು ಕಾರ್ಮಿಕರಿಗೆ ಒದಗಿಸಬೇಕು.

❖ ಗುತ್ತಿಗೆದಾರನು ಪೂರ್ಣಾವಧಿ ಮೇರೆಗೆ ನೇಮಿಸಿಕೊಂಡಿರುವ ಪ್ರತಿ ಕಾರ್ಮಿಕರಿಗೆ ಕರ್ನಾಟಕ ಸರ್ಕಾರದ ಇಲಾಖೆ ನಿಗದಿ ಪಡಿಸಿರುವ ವೇತನ ಅಥವಾ ಕನಿಷ್ಟ ಪ್ರತಿ ತಿಂಗಳಿಗೆ 1800/- ರೂ ಅಥವಾ ಪ್ರತಿ ದಿನಕ್ಕೆ 60 ರೂ ನಂತೆ ಯಾವುದು ಹೆಚ್ಚು ಅದನ್ನು ಪಾವತಿಸ ತಕ್ಕದ್ದು. ವೇತನವನ್ನು ಪಾಲಿಕೆಯ ಅಧಿಕಾರಿಗಳ ಸಮಕ್ಷವೆ ಪಾವತಿಸ ತಕ್ಕದ್ದು.

**ಕಲಂ - 10**

ಗುತ್ತಿಗೆ ಒಪ್ಪಂದವನ್ನು ಮಾಡಿಕೊಳ್ಳುವ ಮೊದಲು ಪ್ರತಿ ಗುತ್ತಿಗೆದಾರನು 1970 ಗುತ್ತಿಗೆ ಕಾರ್ಮಿಕ (ನಿಬಂಧನೆ ಮತ್ತು ರದ್ದತಿ) ಕಾಯಿದೆ ಅನ್ವಯ ಲೈಸನ್ಸ್ ಪಡೆಯ ತಕ್ಕದ್ದು ಹಾಗೂ ಪ್ರತಿಯನ್ನು ಸಲ್ಲಿಸತಕ್ಕದ್ದು ತಪ್ಪಿದ್ದಲ್ಲಿ ಗುತ್ತಿಗೆ ಒಪ್ಪಂದ ಹಾಗು ಕೆಲಸದ ಆದೇಶವನ್ನು ನೀಡಲಾಗುವುದಿಲ್ಲ.

ಅಧಿಕೃತ ಲೈಸನ್ಸ್ ಅನ್ನು ಸಹ ಹೊಂದಿರದ ಗುತ್ತಿಗೆದಾರರು ಹಲವಾರು ವರ್ಷಗಳಿಂದ ಕನಿಷ್ಟ ಕೂಲಿಯಾಗಲಿ, ಕನಿಷ್ಟ ಸೌಲಭ್ಯಗಳಾಗಲಿ ಇಲ್ಲದೆ ಹೀನಾಯವಾಗಿ ಕಾರ್ಮಿಕರನ್ನು ದುಡಿಸಿಕೊಂಡಿದ್ದಾರೆ. ಪಾಲಿಕೆಯ ಅಧಿಕಾರಿಗಳೂ ಸಹ ಗುತ್ತಿಗೆ ಕಾರ್ಮಿಕರ ಕಾಯ್ದೆಯನ್ನು ಕಣ್ಣೆತ್ತಿಯೂ ನೋಡದೆ ಕಡಿಮೆ ಮೊತ್ತ ನಮೂದಿಸುವವರಿಗೆ ಗುತ್ತಿಗೆ ನೀಡುತ್ತಾ ಬಂದಿದೆ. ಮುಖ್ಯ ಉದ್ಯೋಗ ಸಂಸ್ಥೆಯಾಗಿ ಕಾರ್ಮಿಕರನ್ನು ಜೀತದಾಳುಗಳಂತೆ ದುಡಿಸಿಕೊಳ್ಳಲು ದಾರಿ ಮಾಡಿಕೊಟ್ಟಿದೆ. ಎಚ್ಚೆತ್ತ ಕಾರ್ಮಿಕರ ನಿರಂತರ ಹೋರಾಟದ ಫಲವಾಗಿ ಹೊಸ ಟೆಂಡರ್ ನಿಯಮಗಳು ಬಂದಿವೆ. ಅವುಗಳು ಅಕ್ಷರಶಃ ಜಾರಿಯಾಗುವವರೆಗೂ ಕಾರ್ಮಿಕರ ಹೋರಾಟ ನಿಲ್ಲದು.

## ಸೋಲಿನ ಕ್ಷಣ

– ಗೀತಾ ಚಂದ್ರಶೇಖರ

ಸೋಲು ಗೆಲುವಿನ ಸೋಪಾನ
ಎಂದು ಸೋಲುತ್ತಲೇ ಇದ್ದೇನೆ
ಬಹುದೂರದಿಂದ ನಡೆದು
ಬಂದಿದ್ದೇನೆ ಸೋಲಿನ ದಾರಿಯಲ್ಲಿ

ಗೆಲುವೆಂಬ ಗುರಿ ಸೇರಲು
ವಿಜಯಶ್ರೀಯ ಮಡಿಲ ಕಂದನಾಗಲು
ಕಷ್ಟ ಸಾಗರದಲ್ಲಿ ಸುಖವೆಂಬ
ಹನಿಗಾಗಿ ಹುಡುಕುತ್ತಲೇ ಇದ್ದೇನೆ

ದಾಹದಿಂದ ಮರುಗಿದರೂ
ಪೂರೈಸುವ ಆಸರೆಯಿಲ್ಲ
ಸಂತೈಸುವ ಹಸ್ತಗಳಿಲ್ಲ
ಹೊರಟ ಬಿಂದುವಿಗೆ ಮತ್ತೆ
ಹಿಂತಿರುಗಿದರೆ ಬದುಕೇ ನನಗಿಲ್ಲ.

# ಭೂಮಿಗಾಥೆ - 3

ಈ ದಿನ ಮನೆ ಕೆಲಸದ ನಿಂಗಮ್ಮ ಬರಲಿಲ್ಲ. ವಾರದಲ್ಲಿ ಎರಡು ದಿನ ಅವಳ ಗೋಳು ಇದ್ದದ್ದೇ. ಗಂಡ ಕುಡಿದು ಬಂದು ಜಗಳವಾಡಿದಾಗಲೆಲ್ಲ ಮನೆ ಬಿಟ್ಟು ಹೋಗಿಬಿಡ್ತಾಳೆ. ಈ ಕುಡಿತದಿಂದ ಎಷ್ಟೋ ಸಂಸಾರಗಳು ಹಾಳಾಗಿವೆ. ಹಾಳಾಗುತ್ತಲಿವೆ. ಕುಡಿಯುವುದು ತನ್ನ ಜನ್ಮ ಸಿದ್ಧ ಹಕ್ಕು ಎಂದು ಗಂಡು ತನಗೆ ತಾನೇ ಶಾಸನ ಮಾಡಿಕೊಂಡು ಬಿಟ್ಟಿದ್ದಾನೆ. ಹೆಂಡತಿಯನ್ನು ಹೊಡೆದು ಹಿಂಸೆ ಕೊಡುವುದು ತನ್ನ ಪೌರುಷದ ಲಕ್ಷಣವೆಂದೂ ತಿಳಿದಿದ್ದಾನೆ. ನಮ್ಮ ದೇಶ ಅದ್ಯಾವಾಗ "ರಮ್ಮು ರಹಿತ" ವಾಗುವುದೋ ಆಗಲೇ ಕೋಟ್ಯಾಂತರ ಸಂಸಾರಗಳಲ್ಲಿ ಸುಖ ಕಾಣುವುದು. ಕುಡಿತ ಸಂಪೂರ್ಣ ನಾಶವಾಗಬೇಕೆಂದು ಬಯಸುವುದೂ ಒಂದು ಮರೀಚಿಕೆಯೇ ಸೈ. ಮರುದಿನ ನಿಂಗಮ್ಮ ಯಥಾ ಪ್ರಕಾರ ಗೋಳು ಹೇಳಿಕೊಂಡು ಇನ್ನೇಲೆ ಗಂಡನ ಬಳಿಗೆ ಹೋಗುವುದೇ ಇಲ್ಲ ನೋಡಮ್ಮ ದನಕ್ಕೆ ಬಡಿದ ಹಾಗೆ ಬಡಿದಿದ್ದಾನೆ ಎನ್ನುತ್ತಾ ಮೈ ಮೇಲಿನ ಗಾಯ ತೋರಿಸಿದಳು. ಗಾಯಗಳಿಗೆ ಔಷಧಿ ಹಾಕುತ್ತ ನೀನೆಲ್ಲಿ ಗಂಡನನ್ನು ಬಿಟ್ಟಿರ್ತೀಯಾ ? ಎರಡು ದಿನ ಕಳೆದ ಮೇಲೆ ಮತ್ತೆ ಅವನ ಹತ್ತಿರ ಓಡಿಹೋಗ್ತಿಯಾ?

ಇಲ್ಲ ಡಾಕ್ಟ್ರಮ್ಮ. ಈ ಸಲ ಹೋಗಾಕಿಲ್ಲ. ನನ್ನ ಮ್ಯಾಗೇ ಅನುಮಾನ ಪಡ್ತಾವ್ನೆ; ಯಾರ ಜೊತೆನೋ ಸಂಬಂಧ ಐತೆ ಅಂತ ಕೆಟ್ಟಕೆಟ್ಟದ್ನೆಲ್ಲ ಮಾತಾಡ್ತಾನೆ. ಅವನಂದಿದ್ದೆಲ್ಲ ಅನ್ನಿಸಿಕೊಂಡು ಅವನ ಜೊತೆಗೆ ಯಾಕ್ರವ್ವ ಇರ್ಬೇಕು ?

ಹೀಗೆ ಹೇಳಿದ ನಿಂಗಮ್ಮ ಒಂದು ತಿಂಗಳು ಕಾಲ ದೂರವೇ ಇದ್ದಳು. ಗೌರಿಹಬ್ಬದ ದಿನ ಡಾಕ್ಟ್ರಮ್ಮಾರೇ, ಕೆಲ್ಸ ಬ್ಯಾಗ್ ಮುಗ್ಸಿ ಓಯ್ತೀನಿ. ಮನೇಲಿ ಒಬ್ಬಟ್ಟು ತಟ್ಟಬೇಕು ಒಸ್ ಬಟ್ಟೆ ತಂದಿವ್ನಿ ಮತ್ತೆ...... ಮತ್ತೆ ...... ನಾಚುತ್ತ ನಿಂತಳು.

ಅದ್ಯಾಕೆ ಮದುವಣಗಿತ್ತಿತರ ನಾಚ್ಕೋತೀಯ ? ಏನು ಹೇಳು ?

ಅವನನ್ನ ಊಟಕ್ಕೆ ಕರಿಯೋಣ ಅಂದ್ಕೋಡಿವ್ನಿ ಕಣ್ರವ್ವ.

ಅವನು ಅಂದ್ರೆ ಯಾರೇ ? ಓ ನಿನ್ನ ಗಂಡನೋ ? ಲೇ ಅವನ ಹೊಡೆತ ಮರೆತು ಹೋಯ್ತಾ ? ಗಂಡ ಅಂದ್ರೆ ಅದೆಷ್ಟು ಪ್ರೀತಿ ನೋಡು.

ಏನೋ ಡಾಕ್ಟ್ರಮ್ಮ ಗಂಡ ಹೆಂಡ್ತಿ ಅಂದಮ್ಯಾಕೆ ಜಗಳ ಕಾಯೋದು ಇದ್ದಿದ್ದೇ ಅಲ್ವೇನ್ರವ್ವ.

ಅಂತೂ ಗಂಡನ ಜತೆ ರಾಜಿ ಆಗ್ತಿದೀಯಾ ಅನ್ನು. ನಾಳೆ ಸ್ವಲ್ಪ ಬೇಗ ಬಾ. ನಾನು ಬೆಳಗ್ಗೆ ಆಸ್ಪತ್ರೆಗೆ ಬೇಗ ಹೋಗಬೇಕು.

ಆದರೆ ಯಾಕೋ ಮರುದಿನ ಅವಳು ಬರಲೇ ಇಲ್ಲ. ಸಂಜೆ ಅವಳ ತಾಯಿ ಬಂದು ಹೇಳಿದ ಸುದ್ದಿ ಕೇಳಿ ನನಗಾದ ಆಘಾತ ಹೇಳತೀರದು. ಪಾಪ ನಿಂಗಮ್ಮ ಅಡುಗೆ ಮಾಡಿಟ್ಟು ಹೊಸ ಸೀರೆ ಉಟ್ಟು ಸಂತಸದಿಂದ ಗಂಡನನ್ನು ಊಟಕ್ಕೆ ಕರೆಯಲು ಹೋದಳಂತೆ. ಅಲ್ಲಿ ತನಗಾಗಿ ಮೃತ್ಯು ಕಾದಿದೆಯೆಂದು ಹೇಗೆ ತಾನೆ ಅವಳು ಊಹಿಸಿರಲು ಸಾಧ್ಯ. ಮುಂದೆ ನಡೆದದ್ದು ಭಯಾನಕ ಸತ್ಯ. ಅವಳು ಅಲ್ಲಿಗೆ ಹೋದ ಕೂಡಲೇ ಅವಳ ಗಂಡ ಮತ್ತು ಆತನ ಗೆಳೆಯ ಅವಳನ್ನು ಹಿಡಿದುಕೊಂಡು ಕೈ ಕಾಲುಗಳನ್ನು ಕಟ್ಟಿಹಾಕಿ ಬಾಯಿಗೆ ಬಟ್ಟೆ ತುರುಕಿ ಇಬ್ಬರೂ ಅವಳ ಮೇಲೆ ಅತ್ಯಾಚಾರವೆಸಗಿ ಅವಳು ಮುಂದೆ ಇನ್ನಾರೊಡನೆಯೂ ಸಂಬಂಧ ಬೆಳೆಸಬಾರದೆಂದು ಅವಳ ಮರ್ಮಾಂಗಕ್ಕೆ ಕಟ್ಟಿಗೆಯ ಗೂಟ ಹೊಡೆಯಬೇಕೆ ಅಬ್ಬಾ ! ನೆನಸಿದರೆ ಮೈ ಎಲ್ಲ ಜುಂ ಎನ್ನುತ್ತದೆ. ಕೂಗುವುದಕ್ಕೂ ಅಳುವುದಕ್ಕೂ ಸಾಧ್ಯವಿಲ್ಲದ ಅಸಹಾಯಕ ಸ್ಥಿತಿಯಲ್ಲಿ ಈ ನೋವು, ಆಘಾತ ತಾಳಲಾಗದೇ ಅವಳ ಪ್ರಾಣಪಕ್ಷಿ ಹಾರಿಹೋಗಿದೆ. ಅವಳು ಸತ್ತಿದ್ದನ್ನು ನೋಡಿ ಇವರಿಬ್ಬರೂ ಪರಾರಿಯಾಗಬೇಕೆಂದು ಬಾಗಿಲು ತೆರೆದುಕೊಂಡು ಹೊರಬಂದಾಗ ಅವರ ಎಲ್ಲ ಕೃತ್ಯಗಳನ್ನು ಬಾಗಿಲ ಸಂದಿಯಿಂದ ಗಮನಿಸಿದ ಹುಡುಗನೊಬ್ಬ ದಿಗ್ಭ್ರಮೆಯಿಂದ ನಿಂತಿದ್ದನಂತೆ. ಪೋಲೀಸರಿಗೆ ಎಲ್ಲ ವಿಷಯವನ್ನ ಆ ಹುಡುಗನೇ ಹೇಳಿದ್ದನಂತೆ. ಅವಳ ಗಂಡನಲ್ಲಿ ಎಂತಹ ಕ್ರೌರ್ಯ ತುಂಬಿರಬಹುದು. ಹುಲಿ, ಸಿಂಹಗಳು ಕ್ರೂರ ಪ್ರಾಣಿಗಳೆನ್ನುತ್ತೇವೆ. ಮನುಷ್ಯನ ಕ್ರೂರತೆ ಅವುಗಳಿಗಿಂತ ಭಯಂಕರ. ನಮ್ಮ ಕಾನೂನು ಅವನಿಗೆ ಮರಣದಂಡನೆ ವಿಧಿಸಬಹುದು. ಆದರೆ ಅದರಿಂದ ನಿಂಗಮ್ಮನ ಆತ್ಮಕ್ಕೆ ಶಾಂತಿ ಸಿಕ್ಕೀತೇ ? ಅವಳು ಅನುಭವಿಸಿದ ಹಿಂಸೆಯನ್ನು ಅವನೂ ಅನುಭವಿಸಬೇಕು. ಸತ್ತ ಮೇಲೆ ಸ್ವರ್ಗ ನರಕಗಳಿವೆ ಎನ್ನುತ್ತಾರೆ. ಗಂಡಸಿನ ಕ್ರೌರ್ಯ ಯಾವ ನರಕಕ್ಕಿಂತ ಕಡಿಮೆಯಿದೆ ಹೇಳಿ ? ನಿಂಗಮ್ಮನಂತಹ ಮುಗ್ಧ ಜೀವಿಗಳ ಬಲಿ ಪ್ರತಿನಿತ್ಯ ಎಷ್ಟು ನಡೆಯುವುದೋ ? ಪುರುಷರೇ, ದಯವಿಟ್ಟು ಮನುಷ್ಯತ್ವ ಮರೆತು ಮೃಗಗಳಾಗ ಬೇಡಿ.

**- ಡಾ॥ ವಸುಂಧರಾ ಭೂಪತಿ**
ಬೆಂಗಳೂರು




# ಸಾಹಿತ್ಯ ಅಕಾಡೆಮಿ

ದಕ್ಷಿಣ ಪ್ರಾದೇಶಿಕ ಕಛೇರಿ, ಬೆಂಗಳೂರು - ೫೬೦ ೦೦೧

## ಹೊಸ ಪ್ರಕಟಣೆಗಳು

### ಕಾದಂಬರಿಗಳು

★ ಕಾಡಿನ ದಾವೇದಾರ (ಬಂಗಾಳಿ ಕಾದಂಬರಿ)
ಲೇ: ಮಹಾಶ್ವೇತಾದೇವಿ,
ಅನು: ಜಿ.ಕುಮಾರಪ್ಪ, ರೂ.150/-

★ ದಕ್ಷಿಣ ಕಾಮರೂಪದ ಒಂದು ಕಥಾನಕ(ಅಸ್ಸಾಮಿ ಕಾದಂಬರಿ)
ಲೇ: ಇಂದಿರಾ ಗೋಸ್ವಾಮಿ,
ಅನು: ಆರ್.ಎಲ್.ಅನಂತರಾಮಯ್ಯ, ರೂ.180/-

★ ಉಮ್ರಾವ್ ಜಾನ್ ಅದಾ (ಉರ್ದು ಕಾದಂಬರಿ)
ಲೇ: ಮಿರ್ಜಾ ರುಸ್ವಾ,
ಅನು: ಶಾಂತರಸ, ರೂ. 100/-

★ ಹಾವಿನ ಡೊಂಕು (ಸ್ವೀಡಿಷ್ ಕಾದಂಬರಿ)
ಲೇ: ಟೋರ್‌ಗ್ನಿ ಲಿಂಡ್‌ಗ್ರೆಯನ್
ಅನು: ವನಮಾಲಾ ವಿಶ್ವನಾಥ್,
ಹಾನ್ಸ್ ಉ ಹೊಯ್‌ಸ್ಟ್ರಮ ರೂ. 50/-

### ಕಥಾಸಂಕಲನ

★ ಕೊಂಕಣಿ ಕಥಾ ಸಂಗ್ರಹ
ಸಂ: ದಾಮೋದರ ಮೌಜೋ,
ಅನು: ಶಾ.ಮಂ.ಕೃಷ್ಣ ರಾವ್ ರೂ.125/-

★ ಕೃಷ್ಣ ಚಂದರ್ ಆಯ್ದ ಸಣ್ಣ ಕಥೆಗಳು
ಸಂ: ಗೋಪಿಚಂದ್ ನಾರಂಗ್,
ಅನು: ಡಿ.ಎ.ಶಂಕರ್ ರೂ.150/-

★ ಒಂದು ಪೀಳಿಗೆಯ ತಲುಗು ಕಥೆಗಳು
ಸಂ: ಡಿ.ರಾಮಲಿಂಗಮ್,
ಅನು: ಕುಂ.ವೀರಭದ್ರಪ್ಪ ರೂ.150/-

★ ಮಧುರಾಂತಕಂ ರಾಜಾರಾಂ ಕಥೆಗಳು
ಲೇ: ಮಧುರಾಂತಕಂ ರಾಜಾರಾಂ,
ಅನು: ಲಕ್ಷ್ಮೀಪತಿ ಕೋಲಾರ ರೂ.150/-

### ಕಾವ್ಯ

★ ತಲುಗು ಕಾವ್ಯಮಾಲೆ
ಸಂ: ದೇವುಲಪಲ್ಲಿ ರಾಮಾನುಜ ರಾವ್,
ಅನು: ಗುರುಮೂರ್ತಿ ಪೆಂಡಕೂರ್ ರೂ.125/-

★ ಎರಡು ದಶಕದ ಕವಿತೆ
ಸಂ: ಜಿ.ಎಸ್. ಶಿವರುದ್ರಪ್ಪ
ಚನ್ನವೀರ ಕಣವಿ, ರೂ.65/-

★ ಶ್ರೀ ರಾಧಾ
ಲೇ: ರಮಾಕಾಂತ ರಥ್,
ಅನು: ಸಂಧ್ಯಾ ಎಸ್. ರೂ. 60/-

### ನಾಟಕ

★ ಎರಡು ನಾಟಕಗಳು
ಲೇ: ರವೀಂದ್ರನಾಥ ಠಾಗೂರ್,
ಅನು: ಶ್ರೀನಿವಾಸ ಸುತ್ರಾವೆ ರೂ. 50/-

★ ಯಕೃತ್ತು
ಲೇ: ಶ್ಯಾಮ ಮನೋಹರ,
ಅನು: ವೀಣಾ ಶಾಂತೇಶ್ವರ, ರೂ. 50/-

### ಇತರೆ

ಕಲಾಪೂರ್ಣೋದಯ
ಲೇ: ಅನು: ಡಾ|| ಆರ್.ಶೇಷಶಾಸ್ತ್ರಿ,
ಡಾ|| ಜಿ.ಸದಾನಂದಂ ರೂ.100/-

★ ವನದೇವತೆ
ಲೇ: 'ಶಿಲ್ಪಿ' ಗೋಪಾಲಕೃಷ್ಣನ್,
ಅನು: ವಿ.ಚಂದ್ರಮ್ಮ ರೂ.50/-

★ ಮಂದಾರ ರಾಮಾಯಣ
ಲೇ: ಮಂದಾರ ಕೇಶವ ಭಟ್ಟ ರೂ.150/-

### ಭಾರತೀಯ ಸಾಹಿತ್ಯ ನಿರ್ಮಾಣಕಾರರು

★ ಎಂ.ಎಸ್.ಪುಟ್ಟಣ್ಣ
ಲೇ: ಹೆಚ್.ಎಸ್.ಸುಜಾತ ರೂ.25/-

★ ಅಭಿನವಗುಪ್ತ
ಲೇ: ಜಿ.ಟಿ.ದೇಶಪಾಂಡೆ.
ಅನು: ಎಸ್.ಬಾಲಸುಬ್ರಹ್ಮಣ್ಯ ರೂ.75/-

★ ಶಾಂತಿನಾಥ ದೇಸಾಯಿ
ಲೇ: ಜಿ.ಎಸ್.ಆಮೂರ ರೂ.25/-

★ ಅನ್ನಮಾಚಾರ್ಯ
ಲೇ: ಅಡಪ ರಾಮಕೃಷ್ಣ ರಾವ್
ಅನು: ಭಾಗ್ಯಲಕ್ಷ್ಮಿ ಪದಕಿ ರೂ.25/-

★ ಚಿಲಕಮರ್ತಿ ಲಕ್ಷ್ಮಿನರಸಿಂಹಂ
ಲೇ: ವಿ.ವಿ.ಎಲ್.ನರಸಿಂಹರಾವ್,
ಅನು: ಕೆ.ಮರುಳಸಿದ್ದಪ್ಪ ರೂ.25/-

★ ಮೋಹನ ರಾಕೇಶ್
ಲೇ: ಪ್ರತಿಭಾ ಅಗರವಾಲ್,
ಅನು: ಎಸ್.ಜಿ.ಶ್ರೀಮತಿ, ರೂ.25/-

★ ಶಂಬಾ ಜೋಶಿ
ಲೇ: ಪ್ರೊ.ಮಲ್ಲೇಪುರ ಜಿ.ವೆಂಕಟೇಶ್. ರೂ.25/-

★ ಗೊರೂರು ರಾಮಸ್ವಾಮಿ ಅಯ್ಯಂಗಾರ್
ಲೇ: ಸಿ.ಜಿ.ವೆಂಕಟಯ್ಯ ರೂ.25/-

★ ಭೀಮಾ ಭೋಯಿ
ಲೇ: ಸೀತಾಕಾಂತ ಮಹಾಪಾತ್ರ,
ಅನು: ಶ್ರೀಧರ ಪಿಸ್ಸೆ ರೂ.25/-

★ ಸೇಡಿಯಾಪು ಕೃಷ್ಣ ಭಟ್ಟ
ಲೇ: ಎಂ.ರಾಮಚಂದ್ರ ರೂ.25/-

(ಸೂಚನೆ ಮೇಲ್ಕಂಡ ಎಲ್ಲಾ ಪುಸ್ತಕಗಳಿಗೆ ೧೦% ರಿಯಾಯಿತಿ ಇರುತ್ತದೆ) ವಿವರಗಳಿಗೆ ಮತ್ತು ಪ್ರತಿಗಳಿಗೆ ಸಂಪರ್ಕಿಸಿ !

ಸಾಹಿತ್ಯ ಅಕಾಡೆಮಿ
ದಕ್ಷಿಣ ಪ್ರಾದೇಶಿಕ ಕಛೇರಿ, ಸೆಂಟ್ರಲ್ ಕಾಲೇಜು ಆವರಣ, ಡಾ|| ಬಿ.ಆರ್.ಅಂಬೇಡ್ಕರ್ ವೀಧಿ, ಬೆಂಗಳೂರು - ೫೬೦ ೦೦೧,
ದೂರವಾಣಿ : ೨೨೪೫೧೫೨
ಪುಸ್ತಕ ಮಾರಾಟ ವಿಭಾಗ : ಸೋಮವಾರ ದಿಂದ ಶನಿವಾರದವರೆಗೆ, ೯.೩೦ ರಿಂದ ೬.೦೦ ಗಂಟೆಯವರೆಗೆ ತೆರೆದಿರುತ್ತದೆ.
(ಭಾನುವಾರ ರಜಾ)

# ನಾನೇಕೆ ನಿಲ್ದಾಣವಾದೆ ?

ನಾನೇಕೆ ನಿಲ್ದಾಣವಾದೆ ?
ಎಲ್ಲೋ ಹರಿಯುತ್ತಾ
ಬೆಟ್ಟ ತಪ್ಪಲುಗಳಲ್ಲಿ
ತಂಪಾದ ಹಸಿರು ಎಲೆಗಳ
ಸ್ನೇಹದಲ್ಲಿ ನೆನೆದು
ಕಾಡನ್ನು ಸುತ್ತು ವರಿದು
ಹುಚ್ಚು ಹುಚ್ಚಾಗಿ ಬೆಳೆದು ನಿಂತ
ಕಲ್ಲುಗಳ ಮಧ್ಯೆ
ಸಂಜೆ ಮಲ್ಲಿಗೆ ಹೂ ಮುಡಿದ
ಪುಟ್ಟ ಹುಡುಗಿಯ ಹಾಗೆ
ಎಲ್ಲೆಡೆ ನನ್ನ ಕಂಪು ಸೂಸುತ್ತಾ ಇದ್ದವಳು
ಈಗ ನಿಲ್ದಾಣವೇಕಾಗಿ ಬಿಟ್ಟೆ ?
ಬಂದು ಹೋಗುವ ಪ್ರತಿಯೊಂದು
ಗಾಡಿಯ
ಕೊಳಕು ಹೊಗೆ, ಪ್ಲಾಸ್ಟಿಕ್ ಕಸ
ಪ್ಲಾಸ್ಟಿಕ್...... ಕಕ್ಕಸು, ಉಚ್ಚೆಗಳ
ವಾಸನೆಯಲ್ಲಿ
ಒಂದು ಹಿಡಿ ಪ್ರೀತಿ ಹಾಗು
ನನ್ನವರನ್ನು ಹುಡುಕುವ ಸಾಹಸ
ಗಾಡಿಗಳು ಬರುತ್ತವೆ
ಗಾಡಿಗಳು ಹೋಗುತ್ತವೆ
ಬೇಡವಾದ್ದು, ಬೇಕಿಲ್ಲದ್ದು
ಎಲ್ಲವನ್ನೂ ಉದಾರವಾಗಿ ಕೊಟ್ಟು ಹೋಗುತ್ತದೆ.
ತಾನು ಬಂದ ಗುರುತು
ಅದಕ್ಕಿಲ್ಲದಿದ್ದರೂ
ನನ್ನಲ್ಲಿ ನನ್ನ ನಿಲ್ದಾಣದಲ್ಲಿ
ಬಿಟ್ಟು ಹೋದ ಹೊರೆಯಿಂದಾಗಿ
ನಾನಂತು ಭಾರವಾಗುತ್ತಾ ಇದ್ದೀನಿ
ನಿಲ್ದಾಣಗಳು ಊರು ಊರು
ಜನಜನರನ್ನು ತಿರುಗಲು
ಮುಟ್ಟಲು ಸಾಧ್ಯವೆ ?
ನನಗೆ ಈ ಹೊರೆಯನ್ನು ಕಳಚಿ
ಒಂದು ಹಕ್ಕಿಯಾಗುವ ಆಸೆ
ಹೃದಯಗಳನ್ನು ಮುಟ್ಟುವ ಆಸೆ
ಪ್ರೀತಿ ಕೊಡುವ ಆಸೆ
ನನ್ನ ಸಂಜೆ ಮಲ್ಲಿಗೆ ಕಂಪು ಬೀರುವ
ಹಿಡಿ ಪ್ರೀತಿಯನ್ನು
ನಿಮ್ಮ ಅಂಗಳದಲ್ಲಿ
ಉಸಿರಂತೆ ಅರಗಿಸಿಕೊಳ್ಳಲು
ಯಾರಿಗಾದರೂ ಧೈರ್ಯವಿದೆಯೇ ?

- ಸುಮತಿ

BOOK-POST
PRINTED MATTER

REGD No. : CPMG/KA/BGE/289/2002

ವಿಳಾಸ :
ಮಾನಸ
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067